*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– *III* | ಬೆಂಗಳೂರು, ಮಂಗಳವಾರ, ಮಾರ್ಚ್ ೧, ೨೦೧೬ (ಪಾಲ್ಗುಣ ೧೧, ಶಕ ವರ್ಷ ೧೯೩೭) | ನಂ. ೩೪೦ |
|---|---|---|
| ***Part– III*** | ***Bengaluru, Tuesday, March 1, 2016 (Palguna 11, Shaka Varsha 1937)*** | ***No. 340*** |


## *URBAN DEVELOPMENT SECRETARIAT*

## *NOTIFICATION*

***NO. UDD 25 MLR 2016(1), Bangalore, dated: 01.03.2016***

In partial modification of the Notification No. UDD 25 MLR 2016(1) Dated:24.02.2016, Government are here by allots the Offices of the President in respect of the following CITY MUNICIPAL COUNCILS for the EIGHTH TERM as detailed below:

| ***Sl. No.*** | ***Name of the City Municipal Council*** | ***President*** |
|---|---|---|
| ***1*** | ***2*** | ***3*** |
| 1 | Chamarajanagara | BCB(W) |
| 2 | Harihar | BCB |
| 3 | Ramanagara | SC |
| 4 | Gokak | SC(W) |
| 5 | Koppala | G |
| 6 | Hosapete | BCA(W) |

By order and in the name of the Governor of Karnataka

***Siddiq Pasha***
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ– III | ಬೆಂಗಳೂರು, ಮಂಗಳವಾರ, ಮಾರ್ಚ್ ೧, ೨೦೧೬ (ಪಾಲ್ಗುಣ ೧೧, ಶಕ ವರ್ಷ ೧೯೩೭) | ನಂ. ೩೪೧ |
|---|---|---|
| Part– III | Bengaluru, Tuesday, March 1, 2016 (Palguna 11, Shaka Varsha 1937) | No. 341 |



***URBAN DEVELOPMENT SECRETARIAT***

***NOTIFICATION***

***NO. UDD 25 MLR 2016(2), Bangalore, dated: 01.03.2016***

In partial modification of the Notification No. UDD 25 MLR 2016(2) Dated:24.02.2016, Government are here by allots the Offices of the President and Vice President in respect of the following TOWN MUNICIPAL COUNCILS for the EIGHTH TERM as detailed below:

***PRESIDENT***

| Sl. No. | Name of the Town Municipal Council | President |
|---|---|---|
| 1 | 2 | 3 |
| 1 | Muddebihal | G |
| 2 | Talikote | G(W) |
| 3 | Indi | BCB |
| 4 | Annigeri | BCA(W) |
| 5 | Malavalli | BCA |
| 6 | Vijayapura | BCA(W) |
| 7 | Anekal | BCA |
| 8 | Gurumitkal | G |
| 9 | Krishna Raja Pete | BCA(W) |
| 10 | Srirangapatna | G |
| 11 | Hoovina-Hadagali | G |
| 12 | Tarikere | G(W) |
| 13 | Sindagi | BCA |
| 14 | Shikaripura | BCA(W) |
| 15 | Ramdurg | G |
| 16 | Karkala | BCA(W) |
| 17 | Kundapur | BCA(W) |
| 18 | Holenarasipura | G |

***VICE PRESIDENT***

| Sl. No. | Name of the Town Municipal Council | Vice President |
|---|---|---|
| 1 | 2 | 3 |
| 1 | Saundatti | G |
| 2 | Mugalkhod | G(W) |

By order and in the name of the Governor of Karnataka

***Siddiq Pasha***
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– III | ಬೆಂಗಳೂರು, ಮಂಗಳವಾರ, ಮಾರ್ಚ್ ೧, ೨೦೧೬ (ಫಾಲ್ಗುಣ ೧೧, ಶಕ ವರ್ಷ ೧೯೩೭) | ನಂ. ೩೪೨ |
|---|---|---|
| **Part– III** | ***Bengaluru, Tuesday, March 1, 2016 (Palguna 11, Shaka Varsha 1937)*** | ***No. 342*** |


***URBAN DEVELOPMENT SECRETARIAT***

***NOTIFICATION***

***NO. UDD 25 MLR 2016(3), Bangalore, dated: 01.03.2016***

In partial modification of the Notification No. UDD 25 MLR 2016(3) Dated:24.02.2016, Government are here by allots the Offices of the President in respect of the following TOWN PANCHAYAT for the EIGHTH TERM as detailed below:

***PRESIDENT***

| Sl. No. | Name of the Town Panchayat | President |
|---|---|---|
| 1 | 2 | 3 |
| 1 | Mundgod | G |
| 2 | Kushalanagar | G(W) |
| 3 | Aminagad | BCA |
| 4 | Boragaon | BCB(W) |
| 5 | Kamatagi | G |
| 6 | Naganur | BCA(W) |
| 7 | Khanapur | BCA(W) |
| 8 | Virajpet | G |
| 9 | Molakalmuru | G |
| 10 | Hirekerur | G(W) |
| 11 | Kerur | BCB |
| 12 | Chennamman Kittur | G(W) |
| 13 | Saligrama | BCA(W) |
| 14 | Kallolli | G(W) |

By order and in the name of the Governor of Karnataka

***Siddiq Pasha***
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– *IV-A* | ಬೆಂಗಳೂರು, ಮಂಗಳವಾರ, ಮಾರ್ಚ್ ೧, ೨೦೧೬ (ಪಾಲ್ಗುಣ ೧೧, ಶಕ ವರ್ಷ ೧೯೩೭) | ನಂ. ೩೪೩ |
|---|---|---|
| ***Part– IV-A*** | ***Bengaluru, Tuesday, March 1, 2016 (Palguna 11, Shaka Varsha 1937)*** | ***No. 343*** |


***REVENUE SECRETARIAT***

***NOTIFICATION***

***No. RD 68 LGP 2015, Bengaluru, Dated: 29-02-2016***

The draft of the following rules further to amend the Karnataka Land Revenue Rules, 1966 which the Government of Karnataka, proposes to make in exercise of the powers conferred by sub-section 94CC read with section 197 of the Karnataka Land Revenue Act, 1964 (Karnataka Act 12 of 1964) is hereby published as required by sub-section (1) of section 197 of the said Act for the information of persons likely to be affected thereby and notice is hereby given that the said draft will be taken into consideration after the expiry of fifteen days from the date of its publication in the official Gazette.

Any objection or suggestion, which may be received by the State Government from any person with respect to the said draft before the expiry of the period specified above, will be considered by the State Government. Objections or suggestions may be addressed to the Principal Secretary to Government, Revenue Department, Multi Storied Building, Dr.B.R.Ambedkar Veedhi, Bangalore – 560 001.

***DRAFT RULES***

***1.Title and Commencement.***-(1) These rules may be called the Karnataka Land Revenue (Amendment) Rules, 2016.

(2) They shall come into force from the date of their final publication in the Official Gazette.

***2. Amendment of rule 108-X.***- In the Karnataka Land Revenue Rules, 1966, in rule 108-X, in sub rule (1), for the words, brackets and figures "within three months from the date of commencement of the Karnataka Land Revenue (Amendment) Rules, 2015" the words, brackets and figures "***within one year from the date of commencement of the Karnataka Land Revenue (Amendment) Rules, 2015***" shall be substituted.

By Order and in the name of the Governor of Karnataka

***S.L.MAHANTHE GOWDA***
Under Secretary to Government,
Revenue Department (Land Grants-1).

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 500 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| ಭಾಗ- *III* | ಬೆಂಗಳೂರು, ಮಂಗಳವಾರ, ಮಾರ್ಚ್ ೧, ೨೦೧೬ (ಪಾಲ್ಗುಣ ೧೧, ಶಕ ವರ್ಷ ೧೯೩೭) | ನಂ. ೩೪೪ |
|---|---|---|
| ***Part- III*** | ***Bengaluru, Tuesday, March 1, 2016 (Palguna 11, Shaka Varsha 1937)*** | ***No. 344*** |


**ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರ ಪ್ರಕರಣ ಸಂಖ್ಯೆ 97ರ ಅನುಸಾರ**

***ಸಾರ್ವಜನಿಕ ಪ್ರಕಟಣೆ (ಕರಡು)***

**ಸಂ:ಮ.ಸ/ಬಿಡದಿ/ಕಂ.ಶಾ./ಎಸ್.ಎ.ಎಸ್./ಸಿ.ಆರ್-11/2015-16, ದಿನಾಂಕ: 29/02/2016.**

**ಸ್ವಯಂ ಘೋಷಿತ ಆಸ್ತಿ ತೆರಿಗೆ ಪದ್ಧತಿ ಜಾರಿಗೊಳಸುವ ಬಗ್ಗೆ.**

ಬಿಡದಿ ಪುರಸಭೆಯ ವ್ಯಾಪ್ತಿಯಲ್ಲಿರುವ ಮನೆ, ನಿವೇಶನ, ಕೈಗಾರಿಕಾ, ವಾಣಿಜ್ಯ ಕಟ್ಟಡಗಳ ಮಾಲೀಕರು ಅನುಭವದಾರರು ಮತ್ತು ತೆರಿಗೆದಾರರುಗಳಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ,

1. ಈ ಹಿಂದೆ ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರಲ್ಲಿ ಇದ್ದಂತಹ ಅವಕಾಶದಂತೆ ಖಾಲಿ ನಿವೇಶನ ಮತ್ತು ವಿವಿಧ ಬಳಕೆಯ ಕಟ್ಟಡಗಳಿಗೆ ವಾರ್ಷಿಕ ಬಾಡಿಕೆ ಮೌಲ್ಯವನ್ನು ಆಧರಿಸಿ ಆಸ್ತಿ ತೆರಿಗೆ ನಿರ್ಧರಿಸುವ ಪದ್ಧತಿಯು ದಿ: 31.03.2002ರ ಅಂತ್ಯದವರೆಗೂ ಜಾರಿಯಲ್ಲಿತ್ತು. ಆಸ್ತಿ ಮಾಲೀಕರುಗಳಿಗೆ ಉಂಟಾಗುತ್ತಿದ್ದ ಅನೇಕ ರೀತಿಯ ಕಿರುಕುಳ ತಪ್ಪಿಸುವ ಸಲುವಾಗಿ ಈ ಕಾರ್ಯ ವಿಧಾನವನ್ನು ಸರಳಗೊಳಿಸಿ, ಸ್ವಯಂ ಘೋಷಿತ ಆಸ್ತಿ ತೆರಿಗೆ ಪದ್ಧತಿಯನ್ನು ಕರ್ನಾಟಕ ರಾಜ್ಯ ಸರ್ಕಾರವು ತನ್ನ ಅಧಿಸೂಚನೆ ಸಂಖ್ಯೆ ಸಂ. ವ್ಯಶಾಇ 49 ಶಾಸನ 2000. ದಿನಾಂಕ: 05.09.2001ರ ಮೂಲಕ ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರಲ್ಲಿ ತಿದ್ದುಪಡಿ ಮಾಡಿ ಜಾರಿಗೆ ತಂದಿರುತ್ತದೆ. ತರುವಾಯ ಸರ್ಕಾರದ ಅಧಿಸೂಚನೆ ಸಂಖ್ಯೆ: ಯುಡಿಡಿ 26 ಟಿಸಿಟಿ 2000(ಪಿII) ದಿನಾಂಕ: 12.11.2001ರ ಮೂಲಕ ಕರ್ನಾಟಕ ರಾಜ್ಯ ಪತ್ರಿಕೆಯಲ್ಲಿ ಪ್ರಕಟವಾದ ದಿನಾಂಕ: 19.11.2001 ರಿಂದ ಈ ಯೋಜನೆಯು ಜಾರಿಗೆ ಬಂದಿರುವುದಾಗಿಯೂ, ಈ ಅಧಿಸೂಚನೆ ಮೂಲಕ ತಿಳಿಸಲಾಗಿದ್ದು ಮತ್ತು ಆರ್ಥಿಕ ವರ್ಷ ಪ್ರಾರಂಭದಿಂದ ಅಂದರೆ ದಿ: 1.04.2002 ರಿಂದ ಆಸ್ತಿ ತೆರಿಗೆ ಪಾವತಿಗೆ ಅನ್ವಯಿಸುತ್ತದೆ.
2. ಕರ್ನಾಟಕ ರಾಜ್ಯ ಸರ್ಕಾರವು ತನ್ನ ಅಧಿಸೂಚನೆ ಸಂಖ್ಯೆ: ನಅಇ 29 ಎಂಎಲ್ಆರ್ 2015 ದಿನಾಂಕ: 05.08.2015ರ ಮೂಲಕ ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರಲ್ಲಿನ ಪ್ರಕರಣ ಸಂಖ್ಯೆ 3, 9 ಮತ್ತು 357ರ ಮೂಲಕ ಅಧಿಕಾರ ಚಲಾಯಿಸಿ ಕೆಳಕಂಡ ಗ್ರಾಮಪಂಚಾಯಿತಿ ಪ್ರದೇಶಗಳನ್ನು ಒಟ್ಟುಗೂಡಿಸಿ ಸಣ್ಣ ನಗರ ಪ್ರದೇಶವೆಂದೂ ಹಾಗೂ ಸದರಿ ಸಣ್ಣ ನಗರ ಪ್ರದೇಶವನ್ನು ಬಿಡದಿ ಪುರಸಭೆ ಪ್ರದೇಶವೆಂದೂ ಪದನಾಮೀಕರಿಸಿ ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಅಂದರೆ 05.08.2015ರಿಂದ ಜಾರಿಗೆ ಬರುವಂತೆ ಉದ್ಘೋಷಿಸಿರುತ್ತದೆ.

| ಕ್ರ.ಸಂ. | ಗ್ರಾಮಪಂಚಾಯಿತಿ | ಗ್ರಾಮಗಳ ಪ್ರದೇಶ |
|---|---|---|
| 1. | ಬಿಡದಿ | ಬಿಡದಿ ಮತ್ತು ಬಾನಂದೂರು |
| 2. | ಬನ್ನಿಕುಪ್ಪೆ(ಬಿ) | ಕೇತಿಗಾನಹಳ್ಳಿ ಮತ್ತು ಅವರಗೆರೆ |
| 3. | ಕೆಂಚನಕುಪ್ಪೆ | ಕೆಂಚನಕುಪ್ಪೆ, ಕಲ್ಲುಗೋಪಹಳ್ಳಿ, ಉಲ್ತಾರ್ ಹೊಸದೊಡ್ಡಿ ಮತ್ತು ಮುದ್ದಾಪುರ ಕರೇನಹಳ್ಳಿ |
| 4. | ಇಟ್ಟಮಡು | ಇಟ್ಟಮಡು, ಅಬ್ಬನಕುಪ್ಪೆ ಮತ್ತು ಹೆಗ್ಗಡಗೆರೆ |

3. ಜಿಲ್ಲಾಧಿಕಾರಿ ಹಾಗೂ ಜಿಲ್ಲಾ ಚುನಾವಣಾಧಿಕಾರಿ, ರಾಮನಗರ ಜಿಲ್ಲೆ, ರಾಮನಗರರವರು ಅವರ ಕಛೇರಿಯ ಅಧಿಸೂಚನೆ ಸಂಖ್ಯೆ ಚುನಾವಣಾ(ಬಿಡದಿ ಪುರಸಭೆ) ಮೇಲ್ಕಂಡ ಪ್ರದೇಶದಲ್ಲಿ ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರ ಪ್ರಕರಣ ಸಂಖ್ಯೆ 13 ಮತ್ತು 352(2) [ಸರ್ಕಾರದ ಅಧಿಸೂಚನೆ ಸಂಖ್ಯೆ: ಯುಡಿಡಿ 104 ಟಿಎಂಎಸ್ 2014 ದಿನಾಂಕ: 09.01.2015ರ ಮೂಲಕ ಜಿಲ್ಲಾಧಿಕಾರಿಗಳಿಗೆ ಅಧಿಕಾರ ಪ್ರತ್ಯಾಯೋಜನೆ ಆಗಿರುತ್ತದೆ] ರನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ 23 ವಾರ್ಡ್‌ಗಳ ಕ್ಷೇತ್ರ ವಿಂಗಡಣೆಯ ಅಂತಿಮ ಅಧಿಸೂಚನೆ ಹೊರಡಿಸಿರುತ್ತಾರೆ.
4. ಮೇಲ್ಕಂಡ 23 ವಾರ್ಡ್‌ಗಳಿಗೆ ಸದಸ್ಯರ ಚುನಾವಣೆ ಆಗುವವರೆವಿಗೂ ರಾಮನಗರ ಉಪವಿಭಾಗದ ಉಪವಿಭಾಗಾಧಿಕಾರಿಯವರನ್ನು ಆಡಳಿತಾಧಿಕಾರಿಯಾಗಿ ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 104 ಎಂಎಲ್‌ಆರ್ 2015 ದಿನಾಂಕ: 11.08.2015ರ ಮೂಲಕ ನೇಮಕವಾಗಿರುತ್ತಾರೆ. ದಿನಾಂಕ: 25.01.2016ರಂದು ಆಡಳಿತಾಧಿಕಾರಿಗಳು ನಡೆಸಿದ ಸಭೆಯ ವಿಷಯ ಸಂಖ್ಯೆ: 17ರಲ್ಲಿ ಸ್ವಯಂಘೋಷಿತ ಆಸ್ತಿ ತೆರಿಗೆ ಪದ್ಧತಿ ಜಾರಿಗೆ ತರಲು ಮತ್ತು ಕೆಳಕಂಡ ದರದಲ್ಲಿ ಆಸ್ತಿ ತೆರಿಗೆ ವಿಧಿಸಲು ತೀರ್ಮಾನಿಸಿರುತ್ತಾರೆ.

**ಖಾಲಿ ನಿವೇಶನಗಳಿಗೆ :**
**(2005-06ನೇ ಸಾಲಿನ ಆಸ್ತಿ ಮೌಲ್ಯದ ಮಾರುಕಟ್ಟೆ ದರದ ಮೇಲೆ)**

1. 1000 ಚದುರ ಮೀಟರ್‌ಗೆ ಹೆಚ್ಚು ಇಲ್ಲದ ಖಾಲಿ ನಿವೇಶನಕ್ಕೆ ಶೇ.0.1% ರಂತೆ (ಪ್ರತಿ ಸಾವಿರಕ್ಕೆ ರೂ.1.00 ರಂತೆ).
2. 1000 ಚದುರ ಮೀಟರ್‌ನಿಂದ 4000 ಚದುರ ಮೀಟರ್‌ಗಿಂತ ಹೆಚ್ಚಿಲ್ಲದ ಖಾಲಿ ನಿವೇಶನಕ್ಕೆ ಶೇ.0.25% ರಂತೆ (ಪ್ರತಿ ಲಕ್ಷಕ್ಕೆ ರೂ. 25.00 ರಂತೆ).
3. 4000 ಚದುರ ಮೀಟರ್‌ಗಿಂತ ಹೆಚ್ಚಿನ ಆವರಣದ ನಿವೇಶನಕ್ಕೆ ಶೇ.0.2% ರಂತೆ (ಪ್ರತಿ ಲಕ್ಷಕ್ಕೆ ರೂ.20.00 ರಂತೆ).

**ವಿವಿಧ ಬಗೆಯ ಕಟ್ಟಡಗಳಿಗೆ**
**(2005-06ನೇ ಸಾಲಿನ ಆಸ್ತಿ ಮೌಲ್ಯದ ಮಾರುಕಟ್ಟೆ ದರದ ಮೇಲೆ)**

**ಆಸ್ತಿ ತೆರಿಗೆ ದರ**

| | | |
|---|---|---|
| 1. ವಸತಿ ಕಟ್ಟಡಗಳು | : | ಶೇ.0.6% (ಪ್ರತಿ ಸಾವಿರಕ್ಕೆ ರೂ. 6.00 ರಂತೆ). |
| 2. ವಾಣಿಜ್ಯ ಕಟ್ಟಡಗಳು | : | ಶೇ.0.9% (ಪ್ರತಿ ಸಾವಿರಕ್ಕೆ ರೂ. 9.00 ರಂತೆ). |
| 3. ಕೈಗಾರಿಕಾ ಕಟ್ಟಡಗಳು | : | ಶೇ.0.7% (ಪ್ರತಿ ಸಾವಿರಕ್ಕೆ ರೂ. 7.00 ರಂತೆ). |

ಈ ಮೇಲ್ಕಂಡ ಆಸ್ತಿ ತೆರಿಗೆ ಜೊತೆಗೆ 2005-06ನೇ ಸಾಲಿನ ಆಸ್ತಿ ತೆರಿಗೆ ದರದ ಜೊತೆಗೆ ಶೇ.60ರಷ್ಟನ್ನು ಸೇರಿಸಿ ಪಾವತಿಸತಕ್ಕದ್ದು.

5. ತೆರಿಗೆ ನಿರ್ಧರಿಸಿದ ಬಳಿಕ ಆಗುವ ತೆರಿಗೆಯ ಒಟ್ಟು ಮೊತ್ತಕ್ಕೆ ಶೇ.26ರಷ್ಟು ಉಪಕರಗಳನ್ನು ಕೆಳಕಂಡಂತೆ ಪಾವತಿಸಬೇಕಾಗುತ್ತದೆ.

| | | |
|---|---|---|
| 1. ಆರೋಗ್ಯ ಉಪಕರ | ಶೇ.15% ರಷ್ಟು | [ಆರೋಗ್ಯಕರ ಅಧಿನಿಯಮ 1962ರ ಪ್ರಕರಣ ಸಂಖ್ಯೆ3]. |
| 2. ಗ್ರಂಥಾಲಯ ಉಪಕರ | ಶೇ.6% ರಷ್ಟು | [ಗ್ರಂಥಾಲಯ ಕರ ಅಧಿನಿಯಮ 1965ರ ಪ್ರಕರಣ 30(1)]. |
| 3. ಭಿಕ್ಷುಕರ ಉಪಕರ | ಶೇ.3% ರಷ್ಟು | [ಭಿಕ್ಷುಕರ ಅಧಿನಿಯಮ 1975ರ ಪ್ರಕರಣ ಸಂಖ್ಯೆ31]. |
| 4. ನಗರಸಾರಿಗೆ ಉಪಕರ | ಶೇ.2% ರಷ್ಟು | [ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರ ಪ್ರಕರಣ ಸಂಖ್ಯೆ 94ಎ] |

ಕೊನೆಯದಾಗಿ ಸರ್ಕಾರವು ತನ್ನ ಆದೇಶ ಸಂಖ್ಯೆ: ನಅಇ 23 ಟಿಸಿಟಿ 2004. ದಿನಾಂಕ: 06.01.2005ರ ಮೂಲಕ ಘನತ್ಯಾಜ್ಯ ನಿರ್ವಹಣೆ ಮಾಸಿಕ ಶುಲ್ಕವನ್ನು ಕೆಳಕಂಡ ವಿಸ್ತೀರ್ಣಗಳಿಗನುಸಾರವಾಗಿ ವಿವಿಧ ಬಳಕೆಯ ಕಟ್ಟಡಗಳಿಗೆ ವಿಧಿಸಿ ವಸೂಲಿ ಮಾಡುವಂತೆ ಆದೇಶವಿರುತ್ತದೆ. ಇದರಂತೆ ಬಿಡದಿ ಪುರಸಭೆಯ ವ್ಯಾಪ್ತಿಯಲ್ಲಿರುವ ಕಟ್ಟಡದ ಮಾಲೀಕರು ಆಸ್ತಿ ತೆರಿಗೆಯ ಪಾವತಿ ಜೊತೆಯಲ್ಲಿಯೇ ತೆರಿಗೆ ಪಾವತಿ ಮಾಡುವ ವರ್ಷದ ಪೂರಾ 12 ತಿಂಗಳುಗಳಿಗೆ ಆಗುವ ಈ ಶುಲ್ಕವನ್ನು ಸಹ ಪಾವತಿ ಮಾಡುವುದು.

**ವಾಸದ ಕಟ್ಟಡಗಳಿಗೆ** : 1000 ಚ.ಅ.ಗಿಂತ ಕಡಿಮೆಯಿರುವ ಆವರಣಕ್ಕೆ ಪ್ರತಿ ಒಂದು ವರ್ಷಕ್ಕೆ = ರೂ. 120.00

: 1000 ಚ. ಅ.ಗಿಂತ ಹೆಚ್ಚಿರುವ ಆವರಣಕ್ಕೆ ಪ್ರತಿ ಒಂದು ವರ್ಷಕ್ಕೆ = ರೂ.180.00

**ವಾಣಿಜ್ಯ ಕಟ್ಟಡಗಳಿಗೆ** : 1000 ಚ. ಅ.ಗಿಂತ ಕಡಿಮೆಯಿರುವ ಆವರಣಕ್ಕೆ ಪ್ರತಿ ಒಂದು ವರ್ಷಕ್ಕೆ = ರೂ.240.00

: 1000 ಚ. ಅ.ಗಿಂತ ಹೆಚ್ಚಿರುವ ಆವರಣಕ್ಕೆ ಪ್ರತಿ ಒಂದು ವರ್ಷಕ್ಕೆ = ರೂ.600.00

**ಕಾರ್ಖಾನೆಗಳಿಗೆ** : 1000 ಚ. ಅ.ಗಿಂತ ಕಡಿಮೆಯಿರುವ ಆವರಣಕ್ಕೆ ಪ್ರತಿ ಒಂದು ವರ್ಷಕ್ಕೆ = ರೂ.600.00

: 1000 ಚ. ಅ.ಗಿಂತ ಹೆಚ್ಚಿರುವ ಆವರಣಕ್ಕೆ ಪ್ರತಿ ಒಂದು ವರ್ಷಕ್ಕೆ = ರೂ.900.00

**ಹೋಟೆಲ್‌ಗಳು, ಕಲ್ಯಾಣ ಮಂಟಪಗಳು ಮತ್ತು ನರ್ಸಿಂಗ್ ಹೋಂಗಳಿಗೆ**

: 1000 ಚ. ಅ.ಗಿಂತ ಕಡಿಮೆಯಿರುವ ಆವರಣಕ್ಕೆ ಪ್ರತಿ ಒಂದು ವರ್ಷಕ್ಕೆ =ರೂ. 2400.00

: 1000 ಚ. ಅ.ಗಿಂತ ಹೆಚ್ಚಿರುವ ಆವರಣಕ್ಕೆ ಪ್ರತಿ ಒಂದು ವರ್ಷಕ್ಕೆ = ರೂ. 3000.00

ಇದರ ಜೊತೆಗೆ ಮದುವೆ ಮತ್ತು ಆರತಕ್ಷತೆ ಹಾಗೂ ಇತರೆ ಸಮಾರಂಭಗಳಿಗಾಗಿ ಪ್ರತಿ ಸಮಾರಂಭಕ್ಕೆ ರೂ.200/- ಪಾವತಿಸತಕ್ಕದ್ದು.

ಈ ಪ್ರಕಟಣೆಯ ಪ್ಯಾರಾ 5ರಲ್ಲಿ ಆಡಳಿತಾಧಿಕಾರಿಗಳು ಸ್ವಯಂ ಘೋಷಿತ ಆಸ್ತಿ ತೆರಿಗೆ ಪದ್ಧತಿಯಲ್ಲಿ ತೆರಿಗೆ ದರವನ್ನು ನಿಗಧಿಪಡಿಸಿ ತೀರ್ಮಾನಿಸಿರುವ ಬಗ್ಗೆ ಯಾವುದೇ ಆಕ್ಷೇಪಣೆಗಳು ಅಥವಾ ಸಲಹೆಗಳೇನಾದರು ಇದ್ದಲ್ಲಿ ಸಮರ್ಥವಾದ ಕಾರಣಗಳೊಂದಿಗೆ ಹಾಗೂ ಅದನ್ನು ಪ್ರತಿಪಾದಿಸುವ ಸೂಕ್ತ ದಾಖಲೆಗಳೊಂದಿಗೆ ಈ ಪ್ರಕಟಣೆ ದಿನಾಂಕದಿಂದ 30 ದಿವಸಗಳೊಳಗಾಗಿ ಕಛೇರಿ ವೇಳಾ ಸಮಯದಲ್ಲಿ ಮುಖ್ಯಾಧಿಕಾರಿ, ಪುರಸಭೆ, ಬಿಡದಿ (ರಜಾ ದಿವಸಗಳನ್ನು ಹೊರತುಪಡಿಸಿ) ಇವರಿಗೆ ಲಿಖಿತ ಮೂಲಕ ನೀಡಬಹುದಾಗಿರುತ್ತದೆ. ಕಾಲಮೀರಿ ಬಂದ ಆಕ್ಷೇಪಣೆಗಳನ್ನು ಅಥವಾ ಸಲಹೆಗಳನ್ನು ಪರಿಗಣಿಸಲಾಗುವುದಿಲ್ಲ.

ಮುಖ್ಯಾಧಿಕಾರಿ
ಪುರಸಭೆ, ಬಿಡದಿ
ರಾಮನಗರ ತಾಲ್ಲೂಕು

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– IV-A | ಬೆಂಗಳೂರು, ಬುಧವಾರ, ಮಾರ್ಚ್ ೨, ೨೦೧೬ (ಪಾಲ್ಗುಣ ೧೨, ಶಕ ವರ್ಷ ೧೯೩೭) | ನಂ. ೩೪೫ |
|---|---|---|
| ***Part– IV-A*** | ***Bengaluru, Wednesday, March 2, 2016 (Palguna 12, Shaka Varsha 1937)*** | ***No. 345*** |


***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/44/Bill/2015, Bengaluru, Dated: 02-03-2016***

**ಕರ್ನಾಟಕ ವಿಧಾನ ಸಭೆ**

**ಹದಿನಾಲ್ಕನೇ ವಿಧಾನಸಭೆ**

**ಒಂಭತ್ತನೇ ಅಧಿವೇಶನ**

**ಕರ್ನಾಟಕ ವಿಧಾನಮಂಡಲದವರ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ಎರಡನೇ ತಿದ್ದುಪಡಿ) ವಿಧೇಯಕ, 2015**

**(2015ರ ವಿಧಾನಸಭೆಯ ವಿಧೇಯಕ ಸಂಖ್ಯೆ – 44)**

ಕರ್ನಾಟಕ ವಿಧಾನಮಂಡಲದವರ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956 ಕ್ಕೆ ಮತ್ತಷ್ಟು ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡು ಬರುವ ಉದ್ದೇಶಗಳಿಗಾಗಿ ಕರ್ನಾಟಕ ವಿಧಾನಮಂಡಲದವರ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ನ್ನು (1957ರ ಕರ್ನಾಟಕ ಅಧಿನಿಯಮ 2) ಮತ್ತಷ್ಟು ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು, ಭಾರತ ಗಣರಾಜ್ಯದ ಅರವತ್ತಾರನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಕ್ಕದ್ದು:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಕರ್ನಾಟಕ ವಿಧಾನಮಂಡಲದವರ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ಎರಡನೇ ತಿದ್ದುಪಡಿ) ಅಧಿನಿಯಮ, 2015 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 11ಬಿ ಪ್ರಕರಣದ ತಿದ್ದುಪಡಿ.–** ಕರ್ನಾಟಕ ವಿಧಾನಮಂಡಲದವರ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ರ (1957ರ ಕರ್ನಾಟಕ ಅಧಿನಿಯಮ 2) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 11ಬಿ ಪ್ರಕರಣದಲ್ಲಿ, ಈ ಮುಂದಿನದನ್ನು ಕೊನೆಯಲ್ಲಿ ಸೇರಿಸತಕ್ಕದ್ದು ಹಾಗೂ 22.02.2014ರಿಂದ ಜಾರಿಗೆ ಬರುವಂತೆ ಹಾಗೆ ಸೇರಿಸಲಾಗಿದೆ ಎಂದು ಭಾವಿಸತಕ್ಕದ್ದು, ಎಂದರೆ:–

"ಮೃತ ವ್ಯಕ್ತಿಯು 26.12.1978ರ ತರುವಾಯ ಸದಸ್ಯನಾಗಿದ್ದಂತೆ."

**ಉದ್ದೇಶಗಳು ಮತ್ತು ಕಾರಣಗಳ ಹೇಳಿಕೆ**

26.12.1978ಕ್ಕೆ ಮೊದಲು ಮೃತನಾದ ವ್ಯಕ್ತಿಯ ಕುಟುಂಬದ ಸದಸ್ಯರಿಗೆ 22.02.2014ರಿಂದ ಜಾರಿಗೆ ಬರುವಂತೆ ಕುಟುಂಬ ನಿವೃತ್ತಿ ವೇತನವನ್ನು ನೀಡಲು ಉಪಬಂಧ ಕಲ್ಪಿಸಲು ಕರ್ನಾಟಕ ವಿಧಾನ ಮಂಡಲದವರ ಸಂಬಳಗಳ, ನಿವೃತ್ತಿ ವೇತನಗಳ ಮತ್ತು ಭತ್ಯೆಗಳ ಅಧಿನಿಯಮ, 1956ನ್ನು (1957ರ ಕರ್ನಾಟಕ ಅಧಿನಿಯಮ 2) ತಿದ್ದುಪಡಿ ಅವಶ್ಯಕವೆಂದು ಪರಿಗಣಿಸಲಾಗಿದೆ.

ಆದ್ದರಿಂದ ಈ ವಿಧೇಯಕ

**ಆರ್ಥಿಕ ಜ್ಞಾಪನ ಪತ್ರ**

ಪ್ರಸ್ತಾವಿತ ಶಾಸನಾತ್ಮಕ ಕ್ರಮದಿಂದ ವಾರ್ಷಿಕವಾಗಿ ಸುಮಾರು 256.80 ಲಕ್ಷ ರೂಪಾಯಿಗಳ ಹೆಚ್ಚುವರಿ ಆವರ್ತಕ ವೆಚ್ಚ ಉಂಟಾಗುತ್ತದೆ.

**ಟಿ.ಬಿ.ಜಯಚಂದ್ರ,**
ಕಾನೂನು, ಸಂಸದೀಯ ವ್ಯವಹಾರಗಳು
ಮತ್ತು ಉನ್ನತ ಶಿಕ್ಷಣ ಸಚಿವರು

**ಎಸ್. ಮೂರ್ತಿ**
ಕಾರ್ಯದರ್ಶಿ(ಪ್ರ)
ಕರ್ನಾಟಕ ವಿಧಾನ ಸಭೆ

**ಅನುಬಂಧ**

**ಕರ್ನಾಟಕ ವಿಧಾನ ಮಂಡಲದ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ ಅಧಿನಿಯಮ, 1956ರ (1957ರ ಕರ್ನಾಟಕ ಅಧಿನಿಯಮ ಸಂಖ್ಯೆ 2) ಉದ್ಧೃತ ಭಾಗ**

**Xx xx xx**

**11ಬಿ. ಕುಟುಂಬ ನಿವೃತ್ತಿ ವೇತನ.–** (1) ಸದಸ್ಯರೊಬ್ಬರು ತಮ್ಮ ಪದಾವಧಿಯು ಮುಕ್ತಾಯವಾಗುವುದಕ್ಕೆ ಮುನ್ನವೇ ಮರಣ ಹೊಂದಿದಲ್ಲಿ, ಅಥವಾ 11ಎ ಪ್ರಕರಣದಡಿಯಲ್ಲಿ ನಿವೃತ್ತಿ ವೇತನಕ್ಕೆ ಅರ್ಹರಾದ ಒಬ್ಬ ವ್ಯಕ್ತಿಯು ಮೃತರಾದಲ್ಲಿ, 11ಎ ಪ್ರಕರಣದಡಿಯಲ್ಲಿ ಪ್ರತಿ ತಿಂಗಳಿಗೆ ಅರ್ಹನಾದ ನಿವೃತ್ತಿ ವೇತನದ ಶೇಕಡಾ ಐವತ್ತರ ದರದಲ್ಲಿ ಕುಟುಂಬ ನಿವೃತ್ತಿ ವೇತನವನ್ನು ಆತನ ಕುಟುಂಬಕ್ಕೆ ಸಂದಾಯ ಮಾಡತಕ್ಕದ್ದು.

(1ಎ) (1)ನೇ ಉಪಪ್ರಕರಣದಲ್ಲಿ ಏನೇ ಇದ್ದರೂ, ವಿಧಾನ ಪರಿಷತ್ತಿನ ಅಥವಾ ವಿಧಾನ ಸಭೆಯ ಸದಸ್ಯನಾಗಿದ್ದು, ಮೃತನಾದ ವ್ಯಕ್ತಿಯ ಕುಟುಂಬವು, ಆತನು ನಿವೃತ್ತಿ ವೇತನವನ್ನು ಸ್ವೀಕರಿಸುತ್ತಿದ್ದಿರಲಿ ಅಥವಾ ಇಲ್ಲದಿದ್ದಿರಲಿ, (1)ನೇ ಉಪಪ್ರಕರಣದ ಅಡಿಯಲ್ಲಿ ನಿರ್ದಿಷ್ಟಪಡಿಸಿದ ದರದಲ್ಲಿ ಕುಟುಂಬ ನಿವೃತ್ತಿ ವೇತನಕ್ಕೆ ಅರ್ಹನಾಗಿರತಕ್ಕದ್ದು.

**xx xx xx**

## KARNATAKA LEGISLATIVE ASSEMBLY
## FOURTEENTH LEGISLATIVE ASSEMBLY
## NINTH SESSION

# THE KARNATAKA LEGISLATURE SALARIES, PENSIONS AND ALLOWANCES (SECOND AMENDMENT) BILL, 2015

**(L.A. Bill No. 44 of 2015)**

A Bill further to amend the Karnataka Legislature Salaries, Pensions and Allowances Act, 1956.

Whereas it is expedient further to amend the Karnataka Legislature Salaries, Pensions and Allowances Act, 1956 (Karnataka Act 2 of 1957) for the purposes hereinafter appearing;

Be it enacted by the Karnataka State Legislature in the Sixty - sixth year of the Republic of India, as follows:-

**1. Short title and commencement.-** (1) This Act may be called the Karnataka Legislature Salaries, Pensions and Allowances (Amendment) Act, 2015.

(2) It shall come into force at once.

**2. Amendment of section 11B.-**In section 11B of the Karnataka Legislature Salaries, Pensions and Allowances Act, 1956 (Karnataka Act 2 of 1957) in sub-section (1A), the following shall be and shall deemed to have been inserted with effect from 22.02.2014 at the end, namely:-

"as if the deceased person was a member after 26.12.1978."

## *STATEMENT OF OBJECTS AND REASONS*

It is considered necessary to amend the Karnataka Legislature Salaries, Pensions and Allowances Act, 1956, (Karnataka Act 2 of 1957) to make provision to provide family pension to family members of the member deceased before 26.12.1978 operative from 22.02.2014.

Hence the Bill.

## FINANCIAL MEMORANDUM

There will be a recurring approximate additional expenditure of Rs.256.80 Lakhs per annum from the proposed legislative measure.

**T.B.JAYACHANDRA**
Minister for Law, Parliamentary Affairs
and Higher Education

**S. MURTHY**
Secretary (I/C)
Karnataka Legislative Assembly

## ANNEXURE

**Extract from the Karnataka Legislature Salaries, Pensions and Allowances Act, 1956 (Karnataka Act 2 of 1957)**

**xx xx xx**

**11B. Family Pension.-** (1) Where a member dies before the expiry of his term or where a person eligible for pension under section 11A dies, there shall be paid to his family, a family pension at the rate of fifty percent of pension admissible under section 11A per mensem.

(1A) Notwithstanding anything contained in sub-section (1), the family of the deceased person, who was a member of the Legislative Council or the Legislative Assembly whether he was in receipt of pension or not shall be entitled for family pension at the rate specified under sub-section (1)

**xx xx xx**

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 150 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– IV-A | ಬೆಂಗಳೂರು, ಬುಧವಾರ, ಮಾರ್ಚ್ ೨, ೨೦೧೬ (ಫಾಲ್ಗುಣ ೧೨, ಶಕ ವರ್ಷ ೧೯೩೭) | ನಂ. ೩೪೬ |
|---|---|---|
| *Part– IV-A* | *Bengaluru, Wednesday, March 2, 2016 (Palguna 12, Shaka Varsha 1937)* | *No. 346* |


**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 175 ಬಿಎಂಆರ್ 2015, ಬೆಂಗಳೂರು, ದಿನಾಂಕ: 29.02.2016**

ಸರ್ಕಾರದ ಅಧಿಸೂಚನೆ ಸಂಖ್ಯೆ: ವನಇ 142 ಎಂಎನ್‌ಎಕ್ಸ್ 1995, ದಿನಾಂಕ:12–01–1996 ಮತ್ತು ನಅಇ 134 ಬೆಂರೂಪ್ರಾ 2006, ದಿನಾಂಕ:14–05–1997 ರನ್ವಯ ಘೋಷಿಸಲಾಗಿರುವ ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಸ್ಥಳೀಯ ಯೋಜನಾ ಪ್ರದೇಶಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 4(ಎ)(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಕರ್ನಾಟಕ ಸರ್ಕಾರವು ದಿನಾಂಕ:29–02–2016 ರಿಂದ ಜಾರಿಗೆ ಬರುವಂತೆ ದೊಡ್ಡಬಳ್ಳಾಪುರ ತಾಲ್ಲೂಕಿನ 195 ಗ್ರಾಮಗಳನ್ನೊಳಗೊಂಡಂತೆ ಹೆಚ್ಚುವರಿಯಾಗಿ ಸೇರಿಸಿ ಸ್ಥಳೀಯ ಯೋಜನಾ ಪ್ರದೇಶವನ್ನು ವಿಸ್ತರಿಸಲಾಗಿದೆ. ಈಗ ಪ್ರಸ್ತುತ ಹೊಸದಾಗಿ ಸೇರ್ಪಡೆಯಾಗಿರುವ ಗ್ರಾಮಗಳು ಹಾಗೂ ಹಾಲಿ ಇದ್ದ 369 ಗ್ರಾಮಗಳನ್ನು ಒಳಗೊಂಡ ಸ್ಥಳೀಯ ಯೋಜನಾ ಪ್ರದೇಶದ ವಿವರಗಳನ್ನು ಅನುಬಂಧ–1 ರಲ್ಲಿ ನೀಡಲಾಗಿದೆ. ಹಾಗೆಯೇ ಅನುಬಂಧ–2 ರಲ್ಲಿ ವಿಸ್ತರಿತ ಸ್ಥಳೀಯ ಯೋಜನಾ ಪ್ರದೇಶದ ಎಲ್ಲೆಯ ವಿವರಣೆಯನ್ನು ನಮೂದಿಸಲಾಗಿದೆ.

ಸದರಿ ವಿಸ್ತರಿತ ಸ್ಥಳೀಯ ಯೋಜನಾ ಪ್ರದೇಶವನ್ನು ವ್ಯವಸಾಯ ವಲಯವೆಂದು ಪರಿಗಣಿಸಲು ಹಾಗೂ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 4(ಎ)(4) ರಲ್ಲಿನ ಅವಕಾಶದನ್ವಯ ವಿಸ್ತರಿತ ಪ್ರದೇಶದಲ್ಲಿ ಈಗಾಗಲೇ ಸಕ್ಷಮ ಪ್ರಾಧಿಕಾರಗಳಿಂದ ಅನುಮೋದನೆ ನೀಡಿರುವ ಪ್ರಕರಣಗಳನ್ನು ಸಂರಕ್ಷಿಸಿ ಚಾಲ್ತಿಯಲ್ಲಿರುವ ವಲಯ ನಿಯಮಾವಳಿಗಳನ್ನು ಮಹಾಯೋಜನೆಯನ್ನು ಪರಿಷ್ಕರಿಸಿ ಅನುಮೋದನೆಯನ್ನು ಪಡೆಯುವವರೆಗೂ ಅಳವಡಿಸಬಹುದಾಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ನರಸಿಂಹಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**ಅನುಬಂಧ–1**

**ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಪ್ರದೇಶ ಯೋಜನಾ ಪ್ರಾಧಿಕಾರದ ಸ್ಥಳೀಯ ಯೋಜನಾ ಪ್ರದೇಶದಲ್ಲಿ ಒಳಗೊಂಡಿರುವ ಸಂಪೂರ್ಣ ಕಂದಾಯ ಗ್ರಾಮಗಳ ಪಟ್ಟಿ**

| ದೇವನಹಳ್ಳಿ ತಾಲ್ಲೂಕು | | | | |
|---|---|---|---|---|
| ಕ್ರ.ಸಂ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 1. | ಬೆಂಗಳೂರು ಗ್ರಾಮಾಂತರ ಜಿಲ್ಲೆ | ದೇವನಹಳ್ಳಿ | ಕಸಬಾ | ಅಕ್ಕುಪೇಟೆ |
| 2. | | | | ಅಣಿಘಟ್ಟ |
| 3. | | | | ಉಗನವಾಡಿ |
| 4. | | | | ಕುರುಬರಕುಂಟೆ |
| 5. | | | | ಕೋಡಗುರ್ಕಿ |
| 6. | | | | ಗುಳ್ಳೋಬನಹಳ್ಳಿ |
| 7. | | | | ಚಿಕ್ಕಸಣ್ಣೆ |
| 8. | | | | ಯರ್ತಿಗಾನಹಳ್ಳಿ |
| 9. | | | | ದಾಸರಹಳ್ಳಿ |
| 10. | | | | ದೇವಸ್ಥಾನದ ಅಮಾನಿಕೆರೆ |
| 11. | | | | ಪೂಜನಹಳ್ಳಿ |
| 12. | | | | ಬಿದಲೂರು |
| 13. | | | | ಬೈರಪ್ಪನಹಳ್ಳಿ |
| 14. | | | | ವಡೇರಹಳ್ಳಿ |
| 15. | | | | ಸಣ್ಣಅಮಾನಿಕೆರೆ |
| 16. | | | | ಅಕ್ಲೇನಹಳ್ಳಿ |
| 17. | | | | ಅತ್ತಿಬೆಲೆ |
| 18. | | | | ಉದಯಗಿರಿ |
| 19. | | | | ಕೆಂಪತಿಮ್ಮನಹಳ್ಳಿ |
| 20. | | | | ಗಂಗಮುತ್ತನಹಳ್ಳಿ |
| 21. | | | | ಗೋಕರೆ |
| 22. | | | | ಜೋಗಹಳ್ಳಿ |
| 23. | | | | ತಿಮ್ಮೇಗೌಡನಹೊಸಹಳ್ಳಿ |
| 24. | | | | ದೊಡ್ಡಪ್ಪನಹಳ್ಳಿ |
| 25. | | | | ದೇವೇನಹಳ್ಳಿ |
| 26. | | | | ಪ್ರಸನ್ನಹಳ್ಳಿ |
| 27. | | | | ಬೂದಿಹಾಳ |
| 28. | | | | ಬೈಚಾಪುರ |
| 29. | | | | ಮುಳ್ಳಿಅಮಾನಿಕೆರೆ |
| 30. | | | | ಸಾದಹಳ್ಳಿ |
| 31. | | | | ಅರಿಶಿನಕುಂಟೆ |
| 32. | | | | ಅಬ್‌ಚಿಕ್ಕನಹಳ್ಳಿ |
| 33. | | | | ಉಪ್ಪಾರಹಳ್ಳಿ |
| 34. | | | | ಕೆಂಪಲಿಂಗನಪುರ |
| 35. | | | | ಗುಂಡ್ಲಹಳ್ಳಿ |
| 36. | | | | ಗೊಬ್ಬರಗುಂಟೆ |

| ದೇವನಹಳ್ಳಿ ತಾಲ್ಲೂಕು | | | | |
|---|---|---|---|---|
| ಕ್ರ.ಸಂ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 37. | | | | ರಾಯಸಂದ್ರ |
| 38. | | | | ಶೆಟ್ಟೇರಹಳ್ಳಿ |
| 39. | | | | ದೊಡ್ಡಸಣ್ಣೆ |
| 40. | | | | ನೀಲೇರಿ |
| 41. | | | | ಭಂಡರಾಮನಹಳ್ಳಿ |
| 42. | | | | ಬಿನ್ನಮಂಗಲ |
| 43. | | | | ಲಕ್ಷ್ಮೀಪುರ |
| 44. | | | | ಮಾಳಿಗೇನಹಳ್ಳಿ |
| 45. | | | | ಸಾವಕನಹಳ್ಳಿ |
| 46. | | | | ಅಣ್ಣೇಶ್ವರ |
| 47. | | | | ಆವತಿ |
| 48. | | | | ಕನ್ನಮಂಗಲ |
| 49. | | | | ಕೋಡಿಮಂಚೇನಹಳ್ಳಿ |
| 50. | | | | ಗುಟ್ಟಹಳ್ಳಿ |
| 51. | | | | ಚಿಕ್ಕಚೀಮನಹಳ್ಳಿ |
| 52. | | | | ಯಂಬ್ರಹಳ್ಳಿ |
| 53. | | | | ಹಿರೇಅಮಾನಿಕೆರೆ |
| 54. | | | | ದೇವನಹಳ್ಳಿ |
| 55. | | | | ಪಾಳ್ಯ |
| 56. | | | | ಭುವನಹಳ್ಳಿ |
| 57. | | | | ಬೊಮ್ಮವಾರ |
| 58. | | | | ಲಾಲಗೊಂಡನಹಳ್ಳಿ |
| 59. | | | | ಹೊಸತೋಟ |
| 60. | | | | ಸೌತೇಗೌಡನಹಳ್ಳಿ |
| 61. | | | | ಅರದೇಶನಹಳ್ಳಿ |
| 62. | | | | ಇಂದ್ರಸನಹಳ್ಳಿ |
| 63. | | | | ಕಾರಹಳ್ಳಿಅಮಾನಿಕೆರೆ |
| 64. | | | | ಕೊಯಿರಾ |
| 65. | | | | ಚಿನ್ನಕೆಂಪನಹಳ್ಳಿ |
| 66. | | | | ರಾಮನಾಥಪುರ |
| 67. | ಬೆಂಗಳೂರು ಗ್ರಾಮಾಂತರ ಜಿಲ್ಲೆ | **ದೇವನಹಳ್ಳಿ** | **ಕುಂದಾಣ** | ಶ್ಯಾನಪ್ಪನಹಳ್ಳಿ |
| 68. | | | | ದೇವಗಾನಹಳ್ಳಿ |
| 69. | | | | ಬನ್ನಿಮಂಗಲ |
| 70. | | | | ಬಚ್ಚಹಳ್ಳಿ |
| 71. | | | | ವಿಶ್ವನಾಥಪುರ |
| 72. | | | | ಮೂಡಿಗಾನಹಳ್ಳಿ |
| 73. | | | | ಮೀಸಗಾನಹಳ್ಳಿ |
| 74. | | | | ಸುಣ್ಣಘಟ್ಟ |

| ದೇವನಹಳ್ಳಿ ತಾಲ್ಲೂಕು | | | | |
|---|---|---|---|---|
| ಕ್ರ.ಸಂ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 75. | | | | ಸಿಂಗ್ರಹಳ್ಳಿ |
| 76. | | | | ಅರುವನಹಳ್ಳಿ |
| 77. | | | | ಇಲ್‌ತೊರೆ |
| 78. | | | | ಕಾಮೇನಹಳ್ಳಿ |
| 79. | | | | ಚಿಕ್ಕಗೊಲ್ಲಹಳ್ಳಿ |
| 80. | | | | ಜುಟ್ಟನಹಳ್ಳಿ |
| 81. | | | | ಯರ್ರಪ್ಪನಹಳ್ಳಿ |
| 82. | | | | ದ್ಯಾವರಹಳ್ಳಿ |
| 83. | | | | ನರಗನಹಳ್ಳಿ |
| 84. | | | | ಬನ್ನಿಮಂಗಲಅಮಾನಿಕೆರೆ |
| 85. | | | | ಬೆಟ್ಟೇನಹಳ್ಳಿ |
| 86. | | | | ಚಪ್ಪರದಹಳ್ಳಿ |
| 87. | | | | ಮುದ್ದನಾಯ್ಕನಹಳ್ಳಿ |
| 88. | | | | ಚೌಡನಹಳ್ಳಿ |
| 89. | | | | ಸೂಲಕುಂಟೆ |
| 90. | | | | ಅರಸನಹಳ್ಳಿ ಪೆದ್ದನಹಳ್ಳಿ |
| 91. | | | | ಕುಂದಾಣ |
| 92. | | | | ಕೆಂಪತಿಮ್ಮನಹಳ್ಳಿ |
| 93. | | | | ಚಿಕ್ಕಣ್ಣನಹೊಸಹಳ್ಳಿ |
| 94. | | | | ಜಾಲಿಗೆ |
| 95. | | | | ತೈಲಗೆರೆ |
| 96. | | | | ದೊಡ್ಡಗೊಲ್ಲಹಳ್ಳಿ |
| 97. | | | | ನಾಗಮಂಗಲ |
| 98. | | | | ಬ್ಯಾಡರಹಳ್ಳಿ |
| 99. | | | | ಬೈರದೇನಹಳ್ಳಿ |
| 100. | | | | ವಾಜರಹಳ್ಳಿ |
| 101. | | | | ಮಾರಗೊಂಡನಹಳ್ಳಿ |
| 102. | | | | ವೆಂಕಟಾಪುರ |
| 103. | | | | ಸೊಣ್ಣೇನಹಳ್ಳಿ |
| 104. | | | | ಅಲೂರುದುದ್ದನಹಳ್ಳಿ |
| 105. | | | | ಕಾರಹಳ್ಳಿ |
| 106. | | | | ಕೊಟ್ಟಿಗೆತಿಮ್ಮನಹಳ್ಳಿ |
| 107. | | | | ಚಿಕ್ಕೋಬನಹಳ್ಳಿ |
| 108. | | | | ರಬ್ಬನಹಳ್ಳಿ |
| 109. | | | | ತಿಂಡ್ಲು |
| 110. | | | | ದೊಡ್ಡಚೀಮನಹಳ್ಳಿ |
| 111. | | | | ಪಂಡಿತಪುರ |
| 112. | | | | ಬೀರಸಂದ್ರ |
| 113. | | | | ಲಿಂಗಧೀರಗೊಲ್ಲಹಳ್ಳಿ |

| ದೇವನಹಳ್ಳಿ ತಾಲ್ಲೂಕು | | | | |
|---|---|---|---|---|
| ಕ್ರ.ಸಂ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 114. | ಬೆಂಗಳೂರು ಗ್ರಾಮಾಂತರ ಜಿಲ್ಲೆ | ದೇವನಹಳ್ಳಿ | ವಿಜಯಪುರ | ಮನಗೊಂಡನಹಳ್ಳಿ |
| 115. | | | | ಮಾಯಸಂದ್ರ |
| 116. | | | | ಹೆಗ್ಗನಹಳ್ಳಿ |
| 117. | | | | ಸೋಲೂರು |
| 118. | | | | ಇರಿಗೇನಹಳ್ಳಿ |
| 119. | | | | ಕೊಮ್ಮಸಂದ್ರ |
| 120. | | | | ಗೆಜ್ಜೆಗುಪ್ಪೆ |
| 121. | | | | ಚಿಕ್ಕತತ್ತಮಂಗಲ |
| 122. | | | | ರಂಗನಾಥಪುರ |
| 123. | | | | ತಿಮ್ಮಹಳ್ಳಿ |
| 124. | | | | ದೊಡ್ಡತತ್ತಮಂಗಲ |
| 125. | | | | ನಾರಾಯಣಪುರ |
| 126. | | | | ಭಟ್ರೇನಹಳ್ಳಿ |
| 127. | | | | ವಿಜಯಪುರ |
| 128. | | | | ಮಂಗಸಂದ್ರ |
| 129. | | | | ವೆಂಕಟೇನಹಳ್ಳಿ |
| 130. | | | | ಹಾರೋಹಳ್ಳಿ |
| 131. | | | | ಸಾಂಬಾರಗಿಡ ಕಾವಲು |
| 132. | | | | ಕೊಂಡೇನಹಳ್ಳಿ |
| 133. | | | | ಗಡ್ಡದನಾಗೇನಳ್ಳಿ |
| 134. | | | | ಗೊಡ್ಲಮುದ್ದೇನಹಳ್ಳಿ |
| 135. | | | | ಚಿಕ್ಕನಹಳ್ಳಿ |
| 136. | | | | ಯಲುವನಹಳ್ಳಿ |
| 137. | | | | ಶತಕುಂಟನಹಳ್ಳಿ |
| 138. | | | | ದೊಡ್ಡಮುದ್ದೇನಹಳ್ಳಿ |
| 139. | | | | ಪುರ |
| 140. | | | | ಬುಡನ್‌ಪಡಿಯಾ |
| 141. | | | | ವಿಜಯಪುರ ಅಮಾನಿಕೆರೆ |
| 142. | | | | ಮಂಡಿಬೆಲೆ |
| 143. | | | | ಹರಳೂರು ನಾಗೇನಹಳ್ಳಿ |
| 144. | | | | ಹೊಲೇರಹಳ್ಳಿ |
| 145. | | | | ಕೊಕ್ಕರೆಪಡಿಯಾ |
| 146. | | | | ಗುರುರಾಯನ ಹೊಸೂರು |
| 147. | | | | ಗೋಣೂರು |
| 148. | | | | ಚಿನ್ನಪ್ಪನಾಯ್ಕನಹಳ್ಳಿ ಹೊಸೂರು |
| 149. | | | | ತಟಮಾಚನಹಳ್ಳಿ ಅಮಾನಿಕೆರೆ |
| 150. | | | | ಶೆಟ್ಟಿಹಳ್ಳಿ |
| 151. | | | | ದೊಡ್ಡಸಾಗರ ಹಳ್ಳಿ |
| 152. | | | | ಬಿಂಗೀಪುರ |

| ದೇವನಹಳ್ಳಿ ತಾಲ್ಲೂಕು | | | | |
|---|---|---|---|---|
| ಕ್ರ.ಸಂ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 153. | | | | ಬುಳ್ಳಹಳ್ಳಿ |
| 154. | | | | ಚಂದೇನಹಳ್ಳಿ |
| 155. | | | | ಮುದುಗುರ್ಕಿ |
| 156. | | | | ಹಾರಡಿಪುರ |
| 157. | | | | ಹೊಸಹಳ್ಳಿ |
| 158. | | | | ಕೋರಮಂಗಲ |
| 159. | | | | ಗುಡವನಹಳ್ಳಿ |
| 160. | | | | ಗೊಲ್ಲಹಳ್ಳಿ |
| 161. | | | | ಚಿನುಮಂಡನಹಳ್ಳಿ |
| 162. | | | | ತಿಮ್ಮನಹಳ್ಳಿ |
| 163. | | | | ದಂಡಿಗಾನಹಳ್ಳಿ |
| 164. | | | | ಧರ್ಮಪುರ |
| 165. | | | | ಬಿಜ್ಜವಾರ |
| 166. | | | | ಬೈರಾಪುರ |
| 167. | | | | ಚನ್ನಸಂದ್ರ |
| 168. | | | | ವೆಂಕಟಗಿರಿಕೋಟೆ |
| 169. | | | | ಹುರುಳಗುರ್ಕಿ |
| 170. | | | | ಹೊಸಹುಡ್ಯ |
| 171. | | | | ಕಾಚೀಪುರ |
| 172. | | | | ಐಬಸಾಪುರ |
| 173. | | | | ಕೊಣಗಿನಬೆಲೆ |
| 174. | | | | ಗುಮ್ಮನಹಳ್ಳಿ |
| 175. | | | | ಚೀಮಾಚನಹಳ್ಳಿ |
| 176. | | | | ತಮ್ಮೇನಹಳ್ಳಿ |
| 177. | | | | ದೇವನಾಯಕನಹಳ್ಳಿ |
| 178. | | | | ಪಾಳ್ಯ |
| 179. | | | | ಬಿದಲಪುರ |
| 180. | ಬೆಂಗಳೂರು ಗ್ರಾಮಾಂತರ | ದೇವನಹಳ್ಳಿ | **ಚನ್ನರಾಯಪಟ್ಟಣ** | ಬೀಡಿಗಾನಹಳ್ಳಿ |
| 181. | | | | ಬೆಟ್ಟಕೋಟೆ ಅಮಾನಿಕೆರೆ |
| 182. | | | | ಚನ್ನರಾಯಪಟ್ಟಣ ಅಮಾನಿಕೆರೆ |
| 183. | | | | ಮುದ್ದೇನಹಳ್ಳಿ |
| 184. | | | | ಹರಳೂರು |
| 185. | | | | ನಲ್ಲೂರು ಅಮಾನಿಕೆರೆ |
| 186. | | | | ಕಗ್ಗಲಹಳ್ಳಿ |
| 187. | | | | ಕೊಂಡೇನಹಳ್ಳಿ |
| 188. | | | | ಗೋಕರೆ ಬಚ್ಚಹಳ್ಳಿ |
| 189. | | | | ಜೊನ್ನಹಳ್ಳಿ |
| 190. | | | | ತೆಲ್ಲೋಹಳ್ಳಿ ಅಗ್ರಹಾರ |

| ದೇವನಹಳ್ಳಿ ತಾಲ್ಲೂಕು | | | | |
|---|---|---|---|---|
| ಕ್ರ.ಸಂ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 191. | | | | ನಾಗನಾಯಕನಹಳ್ಳಿ |
| 192. | | | | ಪಾಪನಹಳ್ಳಿ |
| 193. | | | | ಬಿದಲಪುರ ಅಮಾನಿಕೆರೆ |
| 194. | | | | ಬೂದಿಗೆರೆ |
| 195. | | | | ಬೊಮ್ಮನಹಳ್ಳಿ |
| 196. | | | | ಚನ್ನಹಳ್ಳಿ |
| 197. | | | | ಮಲ್ಲೇನಹಳ್ಳಿ |
| 198. | | | | ಹ್ಯಾಡಾಳ |
| 199. | | | | ಅಗಲಕೋಟೆ |
| 200. | | | | ಕವಡದಾಸನಹಳ್ಳಿ |
| 201. | | | | ಕೊಮ್ಮಸಂದ್ರ |
| 202. | | | | ಗೋಪಸಂದ್ರ |
| 203. | | | | ರೆಡ್ಡಿಹಳ್ಳಿ |
| 204. | | | | ಶ್ರೋತ್ರಿಯತೆಲ್ಲೋಹಳ್ಳಿ |
| 205. | | | | ನಲ್ಲೂರು |
| 206. | | | | ಪೋಲನಹಳ್ಳಿ |
| 207. | | | | ಬಾಲದಿಮ್ಮನಹಳ್ಳಿ |
| 208. | | | | ಬೂದಿಗೆರೆ ಅಮಾನಿಕೆರೆ |
| 209. | | | | ವರದೇನಹಳ್ಳಿ |
| 210. | | | | ಮಟ್ಟಿಬಾರ್ಲು |
| 211. | | | | ಮಲ್ಲೇಪುರ |
| 212. | | | | ಹೊಸಹಳ್ಳಿ |
| 213. | | | | ಇರಿಗೇನಹಳ್ಳಿ |
| 214. | | | | ಕೊಟ್ನತೆವರು |
| 215. | | | | ಗಂಗವಾರಚೌಡಪ್ಪನಹಳ್ಳಿ |
| 216. | | | | ಚಿಕ್ಕರಾಮನಹಳ್ಳಿ |
| 217. | | | | ಯಲಿಯೂರು |
| 218. | | | | ದೊಡ್ಡಕುರುಬರಹಳ್ಳಿ |
| 219. | | | | ನಲ್ಲಪ್ಪನಹಳ್ಳಿ |
| 220. | | | | ಭಟ್ರಮಾರೇನಹಳ್ಳಿ |
| 221. | | | | ಬಾಲೇಪುರ |
| 222. | | | | ಬೆಟ್ಟಕೋಟೆ |
| 223. | | | | ಚನ್ನರಾಯಪಟ್ಟಣ |
| 224. | | | | ಮರಡಿ ಅಣೆ |
| 225. | | | | ಹಂದ್ರಹಳ್ಳಿ |
| 226. | | | | ಸೋಮತ್ತನಹಳ್ಳಿ |

| ದೊಡ್ಡಬಳ್ಳಾಪುರ ತಾಲ್ಲೂಕು | | | | |
|---|---|---|---|---|
| **ಕ್ರ.ಸಂ.** | **ಜಿಲ್ಲೆಯ ಹೆಸರು** | **ತಾಲ್ಲೂಕಿನ ಹೆಸರು** | **ಹೋಬಳಿ ಹೆಸರು** | **ಗ್ರಾಮಗಳ ವಿವರ** |
| 227. | ಬೆಂಗಳೂರು ಗ್ರಾಮಾಂತರ ಜಿಲ್ಲೆ | **ದೊಡ್ಡಬಳ್ಳಾಪುರ ತಾಲ್ಲೂಕು** | **ಕಸಬಾ** | ದೊಡ್ಡಬಳ್ಳಾಪುರ |
| 228. | | | | ಕೋಳೂರು ಪ್ಲಾಂಟೇಶನ್ |
| 229. | | | | ಅಮಾನಿ ಪಾಲನಕೆರೆ |
| 230. | | | | ಎಸ್.ಎಂ.ಗೊಲ್ಲಹಳ್ಳಿ |
| 231. | | | | ಕರೇನಹಳ್ಳಿ |
| 232. | | | | ಕೆ.ಜಿ.ಗೋವಿಂದಪುರ |
| 233. | | | | ಕೋಳಿಪುರ |
| 234. | | | | ಗಂಗಾಧರಪುರ |
| 235. | | | | ಜಿಂಕೆಬಚ್ಚಹಳ್ಳಿ |
| 236. | | | | ರೋಜಿಪುರ |
| 237. | | | | ತಿಗಳೇಬಾಗಾಯ್ತಿ |
| 238. | | | | ದರ್ಗಾಪುರ |
| 239. | | | | ನಾಗಸಂದ್ರ |
| 240. | | | | ಬಿಸುವನಹಳ್ಳಿ |
| 241. | | | | ವಡ್ಡರಹಳ್ಳಿ |
| 242. | | | | ಮುತ್ತೂರು |
| 243. | | | | ವೀರಭದ್ರನಪಾಳ್ಯ |
| 244. | | | | ಶಿವಪುರ–ಅಮಾನಿಕೆರೆ |
| 245. | | | | ಹೊನ್ನಾಘಟ್ಟ |
| 246. | | | | ಶ್ರೀನಿವಾಸಪುರ |
| 247. | | | | ಆದಿನಾರಾಯಣ ಹೊಸಹಳ್ಳಿ |
| 248. | | | | ಏಕಾಶಿಪುರ |
| 249. | | | | ಕುಂಟನಹಳ್ಳಿ |
| 250. | | | | ಕೊಡಿಗೇಹಳ್ಳಿ |
| 251. | | | | ಕೆಸ್ತೂರು |
| 252. | | | | ಗಾಳಿಪೂಜೆ |
| 253. | | | | ರಘುನಾಥಪುರ |
| 254. | | | | ತಳಗವಾರ |
| 255. | | | | ತಿಪ್ಪಾಪುರ |
| 256. | | | | ದಾಸಗೊಂಡಹಳ್ಳಿ |
| 257. | | | | ಬಾಶೆಟ್ಟಹಳ್ಳಿ |
| 258. | | | | ಮುತ್ಸಂದ್ರ |
| 259. | | | | ವೀರಾಪುರ |
| 260. | | | | ಮೆಣಸಿ |
| 261. | | | | ಹೊಸಹುಡ್ಯ |
| 262. | | | | ಅರಳುಮಲ್ಲಿಗೆ |
| 263. | | | | ಆಲಹಳ್ಳಿ |
| 264. | | | | ಕಂಟನಕುಂಟೆ |

| ದೊಡ್ಡಬಳ್ಳಾಪುರ ತಾಲ್ಲೂಕು | | | | |
|---|---|---|---|---|
| **ಕ್ರಸಂ.** | **ಜಿಲ್ಲೆಯ ಹೆಸರು** | **ತಾಲ್ಲೂಕಿನ ಹೆಸರು** | **ಹೋಬಳಿ ಹೆಸರು** | **ಗ್ರಾಮಗಳ ವಿವರ** |
| 265. | | | | ಕುರುಬರಹಳ್ಳಿ |
| 266. | | | | ಕೊನಘಟ್ಟ |
| 267. | | | | ಕೆ.ಜಿ.ಕುಂಟನಹಳ್ಳಿ |
| 268. | | | | ಚಿಕ್ಕತುಮಕೂರು |
| 269. | | | | ರಾಜಘಟ್ಟ |
| 270. | | | | ತಮ್ಮಶೆಟ್ಟಿಹಳ್ಳಿ |
| 271. | | | | ತಿಮ್ಮಸಂದ್ರ |
| 272. | | | | ಪಾಲನ ಜೋಗಹಳ್ಳಿ |
| 273. | | | | ಲಿಂಗನಹಳ್ಳಿ |
| 274. | | | | ಮಜರ ಹೊಸಹಳ್ಳಿ |
| 275. | | | | ಮಲ್ಲಾತ್ತಹಳ್ಳಿ |
| 276. | | | | ಓಬದೇನಹಳ್ಳಿ |
| 277. | | | | ಮೇಡಹಳ್ಳಿ |
| 278. | | | | ಸೊಣ್ಣಪ್ಪನಹಳ್ಳಿ |
| 279. | | | | ಅರೆಹಳ್ಳಿಗುಡ್ಡದಹಳ್ಳಿ |
| 280. | | | | ಎಳ್ಳುಪುರ |
| 281. | | | | ಕಕ್ಕೇನಹಳ್ಳಿ |
| 282. | | | | ಕಸವನಹಳ್ಳಿ |
| 283. | | | | ಕೋಳೂರು |
| 284. | | | | ಖಾಸ್‌ಬಾಗ್ |
| 285. | | | | ಜಕ್ಕಸಂದ್ರ |
| 286. | | | | ರಾಜಘಟ್ಟ ಅಮಾನಿಕೆರೆ |
| 287. | | | | ತೊಗರಿಘಟ್ಟ |
| 288. | | | | ದರ್ಗಾಜೋಗಿಹಳ್ಳಿ |
| 289. | | | | ನಾಗದೇನಹಳ್ಳಿ |
| 290. | | | | ಪಿಂಡಕೂರುತಿಮ್ಮನಹಳ್ಳಿ |
| 291. | | | | ವರದನಹಳ್ಳಿ |
| 292. | | | | ಮಾದಗೊಂಡನಹಳ್ಳಿ |
| 293. | | | | ಶಿವಪುರ |
| 294. | | | | ಹಸನಘಟ್ಟ |
| 295. | | | | ಸಿದ್ದೇನಾಯ್ಕನಹಳ್ಳಿ |
| 296. | **ಬೆಂಗಳೂರು ಗ್ರಾಮಾಂತರ ಜಿಲ್ಲೆ** | **ದೊಡ್ಡಬಳ್ಳಾಪುರ** | **ದೊಡ್ಡಬೆಳವಂಗಲ** | ಅಂಬಲಗೆರೆ |
| 297. | | | | ಕತ್ತಿಹೊಸಹಳ್ಳಿ |
| 298. | | | | ಕಾಡತಿಪ್ಪೂರು |
| 299. | | | | ಕಸಾಘಟ್ಟ |
| 300. | | | | ಗುಂಡಸಂದ್ರ |
| 301. | | | | ಚಿಕ್ಕಬೆಳವಂಗಲ |
| 302. | | | | ಚಿಗರನಹಳ್ಳಿ |
| 303. | | | | ರಾಮೇಶ್ವರ |

| ದೊಡ್ಡಬಳ್ಳಾಪುರ ತಾಲ್ಲೂಕು | | | | |
|---|---|---|---|---|
| ಕ್ರಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 304. | | | | ತಿಪ್ಪೂರು |
| 305. | | | | ದೊಡ್ಡಹೆಜ್ಜಾಜಿ |
| 306. | | | | ಭೀಮರಾವುತ್ತನಹಳ್ಳಿ |
| 307. | | | | ಬೊಕಿಪುರ |
| 308. | | | | ಶಿರಗೋನಹಳ್ಳಿ |
| 309. | | | | ಮೂಗೇನಹಳ್ಳಿ |
| 310. | | | | ಮಾಡೇಶ್ವರ |
| 311. | | | | ಹಾದ್ರಿಪುರ |
| 312. | | | | ಸಕ್ಕರೆಗೊಲ್ಲಹಳ್ಳಿ |
| 313. | | | | ಅಕ್ಕತಮ್ಮನಹಳ್ಳಿ |
| 314. | | | | ಕೂಗೋನಹಳ್ಳಿ |
| 315. | | | | ಕಾಡತಿಪ್ಪೇನಹಳ್ಳಿ |
| 316. | | | | ಕೋನೇನಹಳ್ಳಿ |
| 317. | | | | ಗಲಿಬಿಲಿಕೋಟೆ |
| 318. | | | | ಚಿಕ್ಕಮಂಕನಾಳ |
| 319. | | | | ಜೋಯಿಸ ಅಗ್ರಹಾರ |
| 320. | | | | ತಂಬೇನಹಳ್ಳಿ |
| 321. | | | | ಶ್ರವಣೂರು |
| 322. | | | | ನಾರನಹಳ್ಳಿ |
| 323. | | | | ಬ್ಯಾಡರಜಕ್ಕಸಂದ್ರ |
| 324. | | | | ಚುಂಚೇಗೌಡ ಹೊಸಹಳ್ಳಿ |
| 325. | | | | ಮುಡ್ಲಕಾಡೇನಹಳ್ಳಿ |
| 326. | | | | ವೆಂಕಟೇಶಪುರ |
| 327. | | | | ಹುಲಿಕುಂಟೆ |
| 328. | | | | ಸೊಣ್ಣೇನಹಳ್ಳಿ |
| 329. | | | | ಅಪ್ಪಕರೇನಹಳ್ಳಿ |
| 330. | | | | ಕಾರಪುರ |
| 331. | | | | ಕಾಮನಅಗ್ರಹಾರ |
| 332. | | | | ಕೋಲಿಗೆರೆ |
| 333. | | | | ಚಿಕ್ಕಕಾಳೇನಹಳ್ಳಿ |
| 334. | | | | ಚಿಕ್ಕಹೆಜ್ಜಾಜಿ |
| 335. | | | | ರಾಂಪುರ |
| 336. | | | | ತರಬನಹಳ್ಳಿ |
| 337. | | | | ದೊಡ್ಡಬೆಳವಂಗಲ |
| 338. | | | | ಭಕ್ತರಹಳ್ಳಿ |
| 339. | | | | ಬೂಚನಹಳ್ಳಿ |
| 340. | | | | ಬೊಮ್ಮಹಳ್ಳಿ |
| 341. | | | | ವಾಣಿಗರಹಳ್ಳಿ |
| 342. | | | | ಮುತ್ತಗದಹಳ್ಳಿ |

**ದೊಡ್ಡಬಳ್ಳಾಪುರ ತಾಲ್ಲೂಕು**

| ಕ್ರ.ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
|---|---|---|---|---|
| 343. | | | | ಹಣಬೆ |
| 344. | | | | ಹುಸ್ಕೂರು |
| 345. | | | | ಕಂಗಾಳಪುರ |
| 346. | | | | ಕಾರೇಪುರ |
| 347. | | | | ಕಲ್ಲುದೇವನಹಳ್ಳಿ |
| 348. | | | | ಗುಂಡ್ಲಹಳ್ಳಿ |
| 349. | | | | ಚಿಕ್ಕನಹಳ್ಳಿ |
| 350. | | | | ಚಿಕ್ಕಹೆಜ್ಜಾಜಿ ಅಮಾನಿಕೆರೆ |
| 351. | | | | ತೊಬುಕುಂಟೆ |
| 352. | | | | ದೊಡ್ಡಮಂಕನಾಳ |
| 353. | | | | ಭದ್ರಾಪುರ |
| 354. | | | | ಬಸವನಪುರ |
| 355. | | | | ಲಿಂಗಾಪುರ |
| 356. | | | | ಮದುರನಹೊಸಹಳ್ಳಿ |
| 357. | | | | ಮಲ್ಲನಾಯಕನಹಳ್ಳಿ |
| 358. | | | | ಹಳೇಕೋಟೆ |
| 359. | | | | ಸಂಕರಸನಹಳ್ಳಿ |
| 360. | | | | ಬೊಮ್ಮನಹಳ್ಳಿ |
| 361. | | | | ಕಲ್ಲೇನಹಳ್ಳಿ |
| 362. | | | | ಶ್ರೀರಾಮನಹಳ್ಳಿ |
| 363. | | | | ಅಲಪ್ಪನಹಳ್ಳಿ |
| 364. | | | | ಕುಕ್ಕಲಹಳ್ಳಿ |
| 365. | | | | ಕಾಮಾಕ್ಷಿಹಳ್ಳಿ |
| 366. | | | | ಕೊಟ್ಟಿಗೆಮಾಚೇನಹಳ್ಳಿ |
| 367. | | | | ಗಾಣಾದಾಳು |
| 368. | | | | ಜಾಲಿಗೆರೆ |
| 369. | | | | ತೇಕಲಹಳ್ಳಿ |
| 370. | | | | ಪುರ |
| 371. | **ಬೆಂಗಳೂರು ಗ್ರಾಮಾಂತರ ಜಿಲ್ಲೆ** | **ದೊಡ್ಡಬಳ್ಳಾಪುರ** | **ಸಾಸಲು** | ಬ್ಯಾಡರಹಳ್ಳಿ |
| 372. | | | | ಬೈಯಪ್ಪನಹಳ್ಳಿ |
| 373. | | | | ಓಜೇನಹಳ್ಳಿ |
| 374. | | | | ಮಲ್ಲೇಗೌಡನಹಳ್ಳಿ |
| 375. | | | | ಹಾಡೋನಹಳ್ಳಿ |
| 376. | | | | ಸುತ್ತಹಳ್ಳಿ |
| 377. | | | | ಅಂಕೋನಹಳ್ಳಿ |
| 378. | | | | ಉಜ್ಜನಿ |
| 379. | | | | ಕಾಡಅಲಪ್ಪನಹಳ್ಳಿ |
| 380. | | | | ಕಲ್ಲುಕುಂಟೆ |
| 381. | | | | ಕಿಲ್ಲರನಹಳ್ಳಿ |

| ದೊಡ್ಡಬಳ್ಳಾಪುರ ತಾಲ್ಲೂಕು | | | | |
|---|---|---|---|---|
| ಕ್ರ.ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 382. | | | | ಗುಮ್ಮನಹಳ್ಳಿ |
| 383. | | | | ಜ್ಯೋತಿಪುರ |
| 384. | | | | ತೋಡಲಬಂಡೆ |
| 385. | | | | ಬಂಕೇನಹಳ್ಳಿ |
| 386. | | | | ಬೆನಕಿನ ಮಡಗು |
| 387. | | | | ಲಕ್ಕೇನಳ್ಳಿ |
| 388. | | | | ಚನ್ನವೀರನಹಳ್ಳಿ |
| 389. | | | | ಮಚ್ಚೇನಹಳ್ಳಿ |
| 390. | | | | ಹೊಸಕೋಟೆ |
| 391. | | | | ಸಾಸಲು |
| 392. | | | | ಆರೂಡಿ |
| 393. | | | | ಕಾಡಕುಂಟೆ |
| 394. | | | | ಕೆ.ಜಿ.ಲಿಂಗೇನಹಳ್ಳಿ |
| 395. | | | | ಗರಡಗಲ್ಲು |
| 396. | | | | ಗೌಡನಕುಂಟೆ |
| 397. | | | | ಯರ್ರಮಾದೇನಹಳ್ಳಿ |
| 398. | | | | ದಡಗಟ್ಟಮಡಗು |
| 399. | | | | ಭಕ್ತರಹಳ್ಳಿ |
| 400. | | | | ಬೊಮ್ಮನಹಳ್ಳಿ |
| 401. | | | | ಲಿಂಗದವೀರನಹಳ್ಳಿ |
| 402. | | | | ವಾಬಸಂದ್ರ |
| 403. | | | | ಮಾಕಳಿ |
| 404. | | | | ಹೊಸನಾಗೇನಹಳ್ಳಿ |
| 405. | | | | ಸೊಣ್ಣೇನಹಳ್ಳಿ |
| 406. | | | | ಅಡಕವಾಳ |
| 407. | | | | ಕನಕೇನಹಳ್ಳಿ |
| 408. | | | | ಕಾಡಬ್ಯಾಡರಹಳ್ಳಿ |
| 409. | | | | ಕೆ.ಜಿ.ದೇವಪಾಲ |
| 410. | | | | ಗುಂಡುಂಗೆರೆ |
| 411. | | | | ಜಕ್ಕೇನಹಳ್ಳಿ |
| 412. | | | | ತಮ್ಮಗಾನಹಳ್ಳಿ |
| 413. | | | | ನರಸಾಪುರ |
| 414. | | | | ಬಾನವತಿ |
| 415. | | | | ಬೈರಾಪುರ |
| 416. | | | | ಶಿಂಗೇನಹಳ್ಳಿ |
| 417. | | | | ಮಲ್ಲಸಂದ್ರ |
| 418. | | | | ಹಾರೋಹಳ್ಳಿ |
| 419. | | | | ಸೂಲುಕುಂಟೆ |
| 420. | | | | ಹೊಸಹಳ್ಳಿ |

| ದೊಡ್ಡಬಳ್ಳಾಪುರ ತಾಲ್ಲೂಕು | | | | |
|---|---|---|---|---|
| ಕ್ರ.ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 421. | **ಬೆಂಗಳೂರು ಗ್ರಾಮಾಂತರ ಜಿಲ್ಲೆ** | **ದೊಡ್ಡಬಳ್ಳಾಪುರ** | **ತೂಬಗೆರೆ** | ಅಚಾರ್ಲಹಳ್ಳಿ |
| 422. | | | | ಕರೇನಹಳ್ಳಿ |
| 423. | | | | ಕಾವಲಹಳ್ಳಿ |
| 424. | | | | ಕಮಲೂರು |
| 425. | | | | ಕೆಳಗಿನ ನಾಯ್ಕರಂಡಹಳ್ಳಿ |
| 426. | | | | ಗೆದ್ದಲಹಳ್ಳಿ |
| 427. | | | | ಯದ್ಲಹಳ್ಳಿ |
| 428. | | | | ತಿರುಮಗೊಂಡನಹಳ್ಳಿ |
| 429. | | | | ದುರ್ಗೇನಹಳ್ಳಿ |
| 430. | | | | ನೆಲ್ಲುಕುಂಟೆ |
| 431. | | | | ಬಚ್ಚಹಳ್ಳಿ |
| 432. | | | | ಮಜರಾ ಹೊಸಹಳ್ಳಿ |
| 433. | | | | ಮುತ್ತಗದಹಳ್ಳಿ |
| 434. | | | | ಮ್ಯಾಕಲಹಳ್ಳಿ |
| 435. | | | | ಚೊಕ್ಕನಹಳ್ಳಿ |
| 436. | | | | ಹಾಡೋನಹಳ್ಳಿ |
| 437. | | | | ಸೋಮಶೆಟ್ಟಿಹಳ್ಳಿ |
| 438. | | | | ಸುಬ್ಬರಾಯನಗೇನಹಳ್ಳಿ |
| 439. | | | | ಶ್ರೀನಿವಾಸಪುರ |
| 440. | | | | ಊದನಹಳ್ಳಿ |
| 441. | | | | ಕಾರನಾಳ |
| 442. | | | | ಕಾಚಹಳ್ಳಿ |
| 443. | | | | ಕೆ.ಜಿ.ಲಕ್ಕಸಂದ್ರ |
| 444. | | | | ಗಂಟಿಗಾನಹಳ್ಳಿ |
| 445. | | | | ಚಿಕ್ಕರಾಯಪ್ಪನಹಳ್ಳಿ |
| 446. | | | | ತಪಸೀಪುರ |
| 447. | | | | ದಿನ್ನೇನಹಳ್ಳಿ |
| 448. | | | | ದೊಡ್ಡರಾಯಪ್ಪನಹಳ್ಳಿ |
| 449. | | | | ಭೂಮೇನಹಳ್ಳಿ |
| 450. | | | | ಲಕ್ಷ್ಮೀದೇವಿಪುರ |
| 451. | | | | ಮೇಳೆಕೋಟೆ |
| 452. | | | | ಮುತ್ಯಾಲಮ್ಮನಹಳ್ಳಿ |
| 453. | | | | ಮಾಚಗೊಂಡಹಳ್ಳಿ |
| 454. | | | | ಚೋಗೊಂಡಹಳ್ಳಿ |
| 455. | | | | ಹೆಗ್ಗಡಿಹಳ್ಳಿ |
| 456. | | | | ಅಂತರಹಳ್ಳಿ |
| 457. | | | | ಸುಬ್ಬರಾಯನ ನಾಗೇನಹಳ್ಳಿ |
| 458. | | | | ಕುರುಬರಹಳ್ಳಿ |
| 459. | | | | ಕಲ್ಲುಕೋಟೆ |

| ದೊಡ್ಡಬಳ್ಳಾಪುರ ತಾಲ್ಲೂಕು | | | | |
|---|---|---|---|---|
| ಕ್ರ.ಸಂ. | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 460. | | | | ಗುಂಜೂರು |
| 461. | | | | ಚಿಕ್ಕಮುದ್ದೇನಹಳ್ಳಿ |
| 462. | | | | ತಪಸೀಹಳ್ಳಿ |
| 463. | | | | ಹಿರೇಮುದ್ದೇನಹಳ್ಳಿ |
| 464. | | | | ನರಗನಹಳ್ಳಿ |
| 465. | | | | ಬೀಡಿಕೆರೆ |
| 466. | | | | ಲಗುಮೇನಹಳ್ಳಿ |
| 467. | | | | ಮುಕ್ಕುಡಿಘಟ್ಟ |
| 468. | | | | ಮಾರನಹಳ್ಳಿ |
| 469. | | | | ಮಾಸ್ತಮ್ಮನಹಳ್ಳಿ |
| 470. | | | | ಮೇಲಿನಜೂಗಾನಹಳ್ಳಿ |
| 471. | | | | ಸೋಣ್ಣಮಾರನಹಳ್ಳಿ |
| 472. | | | | ಅಳ್ಳಾಳಸಂದ್ರ |
| 473. | | | | ಕಂಚಿಗನಾಳ |
| 474. | | | | ಕುರುವಿಗೆರೆ |
| 475. | | | | ಚೆನ್ನಪುರ |
| 476. | | | | ಸೌತೇನಹಳ್ಳಿ |
| 477. | | | | ಮೂಗಚಿನೇನಹಳ್ಳಿ |
| 478. | | | | ಶೀರಿವಾರ |
| 479. | | | | ನೆಲ್ಲುಕುಂಟೆ ಪಾರೇಸ್ಟ್ |
| 480. | | | | ನೇರಳಘಟ್ಟ |
| 481. | | | | ಮರಳೇನಹಳ್ಳಿ |
| 482. | | | | ಮೇಲ್ನಾಯಕನಹಳ್ಳಿ |
| 483. | | | | ಕೆಳಗಿನ ಜೂಗಾನಹಳ್ಳಿ |
| 484. | | | | ಗೂಳ್ಯನಂದಿಗುಂದ |
| 485. | | | | ಚೀಲೇನಹಳ್ಳಿ |
| 486. | | | | ತೂಬಗೆರೆ |
| 487. | | | | ದಂಡದಾಸಕೊಡಿಗೇಹಳ್ಳಿ |
| 488. | | | | ಹೀರೇನಗುಡ್ಡದಹಳ್ಳಿ |
| 489. | | | | ಬೀಡಿಕೆರೆ ಅಗ್ರಾಹಾರ |
| 490. | | | | ಕಲ್ಲುದೇವನಹಳ್ಳಿ |
| 491. | | | | ಗೆಜ್ಜಗದಹಳ್ಳಿ |
| 492. | | | | ಬೈರಸಂದ್ರ |
| 493. | **ಬೆಂಗಳೂರು ಗ್ರಾಮಾಂತರ ಜಿಲ್ಲೆ** | **ದೊಡ್ಡಬಳ್ಳಾಪುರ** | **ಮದುರೆ** | ದೊಡ್ಡತುಮಕೂರು |
| 494. | | | | ಕರೀಂ ಸೊಣ್ಣೇನಹಳ್ಳಿ |
| 495. | | | | ಗೌಡಹಳ್ಳಿ |

| ಬೆಂಗಳೂರು ಉತ್ತರ (ಅಪರ) ತಾಲ್ಲೂಕು | | | | |
|---|---|---|---|---|
| ಕ್ರ.ಸಂ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 496. | | | | ಗಡೇನಹಳ್ಳಿ |
| 497. | | | | ಶೆಟ್ಟಿಗೆರೆ |
| 498. | | | | ಬಿಲ್ಲಮಾರನಹಳ್ಳಿ |
| 499. | | | | ಮುತ್ತುಗದಹಳ್ಳಿ |
| 500. | | | | ಚೊಕ್ಕನಹಳ್ಳಿ |
| 501. | | | | ಚಿಕ್ಕಜಾಲ |
| 502. | | | | ದೊಡ್ಡಜಾಲ |
| 503. | | | | ಬೇಗೂರು |
| 504. | | ಬೆಂಗಳೂರ ಉತ್ತರ (ಅಪರ) | ಜಾಲ1 | ಮಾರನಾಯ್ಕನಹಳ್ಳಿ |
| 505. | | | | ಹುತ್ತನಹಳ್ಳಿ |
| 506. | | | | ಚಿಕ್ಕನಹಳ್ಳಿ |
| 507. | | | | ದೊಡ್ಡಜಾಲ ಅಮಾನಿಕೆರೆ |
| 508. | ಬೆಂಗಳೂರು ನಗರ ಜಿಲ್ಲೆ | | | ಬೈಯ್ಯನಹಳ್ಳಿ |
| 509. | | | | ಮೀನಕುಂಟೆ |
| 510. | | | | ತರಬನಹಳ್ಳಿ |
| 511. | | | | ನವರತ್ನ ಅಗ್ರಹಾರ |
| 512. | | | | ಚನ್ನಹಳ್ಳಿ |
| 513. | | | | ಮೀಸಿಗಾನಹಳ್ಳಿ |
| 514. | | | | ತರಹುಣಸೆ |
| 515. | | | | ಕಾಡಿಗಾನಹಳ್ಳಿ |
| 516. | | | | ಕುದುರೆಗೆರೆ |
| 517. | | | | ಪಾಪನಹಳ್ಳಿ |
| 518. | | | | ಹೊಸಹಳ್ಳಿ |
| 519. | | | | ಅರೆಬಿನ್ನಮಂಗಲ |
| 520. | | | | ದುಮ್ಮನಹಳ್ಳಿ |
| 521. | | | | ಬಿ.ಕೆ.ಹಳ್ಳಿ ಅಮಾನಿಕೆರೆ |
| 522. | | | | ಮರಳುಕುಂಟೆ |
| 523. | | | | ಚಲುಮೆಕುಂಟೆ |
| 524. | | | | ಉಣಸೂರು |
| 525. | | | | ಬಾಗಲೂರು |
| 526. | | | | ಮಹಾದೇವ ಕೊಡಿಗೇಹಳ್ಳಿ |
| 527. | | | | ಮೈಲನಹಳ್ಳಿ |
| 528. | | | | ಎಂ.ಹೊಸಹಳ್ಳಿ |
| 529. | | | | ಪಾಳ್ಯಾ |
| 530. | | | | ಬೋಯಿಲಹಳ್ಳಿ |
| 531. | | | | ಮಾರಸಂದ್ರ |

| ಬೆಂಗಳೂರು ಉತ್ತರ (ಅಪರ) ತಾಲ್ಲೂಕು | | | | |
|---|---|---|---|---|
| ಕ್ರ.ಸಂ | ಜಿಲ್ಲೆಯ ಹೆಸರು | ತಾಲ್ಲೂಕಿನ ಹೆಸರು | ಹೋಬಳಿ ಹೆಸರು | ಗ್ರಾಮಗಳ ವಿವರ |
| 532. | | | | ಹೂವಿನಾಯ್ಕನಹಳ್ಳಿ |
| 533. | | | | ಗೊಲ್ಲಹಳ್ಳಿ |
| 534. | | | | ಬಿ.ಕೆ.ಹಳ್ಳಿ |
| 535. | | | | ಸಿಂಗಹಳ್ಳಿ |
| 536. | | ಬೆಂಗಳೂರ ಉತ್ತರ (ಅಪರ) | ಹೆಸರಘಟ್ಟ –1 | ಶ್ರೀರಾಮನಹಳ್ಳಿ |
| 537. | | | | ಹೆಸರಘಟ್ಟ |
| 538. | | | | ಕಾಕೋಳು |
| 539. | | | | ಬೈಯಪ್ಪನಹಳ್ಳಿ |
| 540. | | | | ಹೆಸರಘಟ್ಟ ಗ್ರಾಸ್ ಫಾರಂ |
| 541. | | | | ಹೆಸರಘಟ್ಟ ರಿಸರ್ವ್ ವಾಯಿರ್ |
| 542. | | | | ಕೊಲುವರಾಯನಹಳ್ಳಿ |
| 543. | | | | ದಿಬ್ಬೂರು |
| 544. | | | | ದಾಸನಹಳ್ಳಿ |
| 545. | | | | ಮತ್ತಕೂರು |
| 546. | | | | ಅಮಾನಿಮಾರಸಂದ್ರ |
| 547. | | | | ನೆಲ್ಲುಕುಂಟೆ |
| 548. | | | | ಚೊಕ್ಕನಹಳ್ಳಿ |
| 549. | | | | ಸಾದೇನಹಳ್ಳಿ |
| 550. | | | | ಅರಕೆರೆ |
| 551. | | | | ಕಕ್ಕೇಹಳ್ಳಿ |
| 552. | | | | ಕಡತನಮಲೆ |
| 553. | | | | ಬ್ಯಾತ |
| 554. | | | | ಸೊಣ್ಣೆನಹಳ್ಳಿ |
| 555. | | | | ಚನ್ನಸಂದ್ರ |
| 556. | | | | ಚಲ್ಲಿಹಳ್ಳಿ |
| 557. | | | | ಹನಿಯೂರು |
| 558. | | | | ಸೀತೆಕೆಂಪನಹಳ್ಳಿ |
| 559. | | | | ಅದ್ದೆವಿಶ್ವನಾಥಪುರ |
| 560. | | | | ಕಾಮಾಕ್ಷಿಪುರ |
| 561. | | | | ಶ್ಯಾನುಬೋಗನಹಳ್ಳಿ |
| 562. | | | | ಬೈರಾಪುರ |
| 563. | | | | ಶೀರೇಸಂದ್ರ |
| 564. | | | | ಸುರದೇನಪುರ |

**ಎನ್. ನರಸಿಂಹಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

**ಅನುಬಂಧ– 2**

**ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಯೋಜನಾ ಪ್ರದೇಶಕ್ಕೆ ಹೆಚ್ಚುವರಿ ಗ್ರಾಮಗಳನ್ನು ಸೇರಿಸಿದ ನಂತರ ಮಾರ್ಪಾಡು ಆಗಿರುವ ಒಟ್ಟು ಪ್ರದೇಶದ ಗಡಿಯ ವಿವರಣೆ.**

ಸದರಿ ಯೋಜನಾ ಪ್ರದೇಶದ ಗಡಿಯು ದೇವನಹಳ್ಳಿ ತಾಲ್ಲೂಕು, ಚನ್ನರಾಯಪಟ್ಟಣ ಹೋಬಳಿಯ ಹಂದ್ರಹಳ್ಳಿ ಗ್ರಾಮದ ಆಗ್ನೇಯ ಮೂಲೆಯಿಂದ ಪ್ರಾರಂಭವಾಗಿ ಹಂದ್ರಹಳ್ಳಿ ಗ್ರಾಮವನ್ನು ಆವರಿಸಿಕೊಂಡು ದೇವನಹಳ್ಳಿ ತಾಲ್ಲೂಕು ಪೂರ್ವದ ಗಡಿಯ ಉತ್ತರಕ್ಕೆ ಚಲಿಸುತ್ತಾ ಬೂದಿಗೆರೆ ಅಮಾನಿಕೆರೆ, ಗಂಗವಾರ–ಚೌಡಪ್ಪನಹಳ್ಳಿ, ಸೋಮತ್ತನಹಳ್ಳಿ, ದೇವನಾಯಕನಹಳ್ಳಿ, ಬಿದಲಪುರ ಅಮಾನಿಕೆರೆ, ಬಿದಲಪುರ, ಬಾಲೇಪುರ, ಮಲ್ಲಾಪುರ, ನಲ್ಲಪ್ಪನಹಳ್ಳಿ, ಚೀಮಾಚನಹಳ್ಳಿ ಗ್ರಾಮಗಳನ್ನು ಆವರಿಸಿಕೊಂಡು ಸದರಿ ಗ್ರಾಮದ ಪೂರ್ವ ಗಡಿಯುದ್ದಕ್ಕೂ ಚಲಿಸಿ ಪಾಪನಹಳ್ಳಿ ಗ್ರಾಮದ ನೈರುತ್ಯ ಮೂಲೆ ತಲುಪಿ ಪೂರ್ವಕ್ಕೆ ಚಲಿಸಿ ಪಾಪನಹಳ್ಳಿ ಗ್ರಾಮವನ್ನು ಆವರಿಸಿಕೊಂಡು ಉತ್ತರಕ್ಕೆ ಚಲಿಸುತ್ತಾ, ವರದೇನಹಳ್ಳಿ ಕೊಣಗಿನಬೆಲೆ, ಗೋಪಸಂದ್ರ, ಐಬಸಾಪುರ ಗ್ರಾಮಗಳನ್ನು ಆವರಿಸಿಕೊಂಡು ನಂತರ ನೈರುತ್ಯಕ್ಕೆ ಚಲಿಸುತ್ತಾ, ಚನ್ನರಾಯಪಟ್ಟಣ ಗ್ರಾಮದ ಆಗ್ನೇಯ ಮೂಲೆಯಲ್ಲಿ ಪಶ್ಚಿಮಕ್ಕೆ ಚಲಿಸುತ್ತಾ, ಚನ್ನರಾಯಪಟ್ಟಣ–ಅಮಾನಿಕೆರೆ ಗ್ರಾಮದ ಈಶಾನ್ಯ ದಿಕ್ಕನ್ನು ತಲುಪಿ ಪಶ್ಚಿಮಕ್ಕೆ ಚಲಿಸುತ್ತಾ ಧರ್ಮಾಪುರ ಗ್ರಾಮದ ಆಗ್ನೇಯ ಮೂಲೆಯನ್ನು ತಲುಪಿ ಉತ್ತರಕ್ಕೆ ಚಲಿಸುತ್ತಾ, ಬೀಡಿಗಾನಹಳ್ಳಿ, ಹಿರಿಗಾನಹಳ್ಳಿ, ಧರ್ಮಪುರ, ಶತಕುಂಟನಹಳ್ಳಿ, ಬುಡನ್‌ಪಾಡ್ಯ, ಹಾರಡಿಪುರ, ವಿಜಯಪುರ, ಯಲುವನಹಳ್ಳಿ ಗ್ರಾಮಗಳನ್ನು ಆವರಿಸಿಕೊಂಡು ಸದರಿ ಗ್ರಾಮಗಳ ಗಡಿಯುದ್ದಕ್ಕೂ ಉತ್ತರಕ್ಕೆ ಚಲಿಸಿ ವಿಜಯಪುರ ಅಮಾನಿಕೆರೆ, ವೆಂಕಟೇನಹಳ್ಳಿ, ಕೊಮ್ಮಸಂದ್ರ, ಭಟ್ರೇನಹಳ್ಳಿ ಗ್ರಾಮಗಳನ್ನು ಆವರಿಸಿಕೊಂಡು ಭಟ್ರೇನಹಳ್ಳಿ ಗ್ರಾಮದ ಈಶಾನ್ಯ ಮೂಲೆಯಲ್ಲಿ ಪಶ್ಚಿಮಕ್ಕೆ ತಿರುಗಿ ಹರಳೂರು ನಾಗೇನಹಳ್ಳಿ, ರಂಗನಾಥಪುರ, ಚನ್ನಪ್ಪನನಾಯಕನ ಹೊಸೂರು ಗ್ರಾಮಗಳನ್ನು ಆವರಿಸಿಕೊಂಡು ಶಿಡ್ಲಘಟ್ಟ ತಾಲ್ಲೂಕು ಮತ್ತು ಚಿಕ್ಕಬಳ್ಳಾಪುರ ತಾಲ್ಲೂಕು ಸಂಧಿಸುವ ಜಾಗವನ್ನು ಸೇರುತ್ತದೆ. ನಂತರ ಎಲ್ಲೆಯು ಪಶ್ಚಿಮಕ್ಕೆ ಚಲಿಸುತ್ತಾ ಸಾಂಬಾರ್‌ಗಿಡದಕಾವಲು, ಗೊಲ್ಲಹಳ್ಳಿ, ಹೊಸಹಳ್ಳಿ, ಮುದುಗುರ್ಕಿ ಗ್ರಾಮಗಳನ್ನು ಆವರಿಸಿಕೊಂಡು ಬಿಂಗೀಪುರ ಗ್ರಾಮವನ್ನು ಆವರಿಸಿಕೊಂಡು ಬಿಂಗೀಪುರ ಗ್ರಾಮದ ಈಶಾನ್ಯ ಮೂಲೆಯನ್ನು ಸೇರುತ್ತದೆ. ನಂತರ ಎಲ್ಲೆಯು ಉತ್ತರಕ್ಕೆ ಚಲಿಸಿ ಬಿಂಗೀಪುರ, ಹುರುಳಗುರ್ಕಿ ಗ್ರಾಮಗಳನ್ನು ಆವರಿಸಿಕೊಂಡು ನಂತರ ದಕ್ಷಿಣಕ್ಕೆ ಚಲಿಸಿ ದೊಡ್ಡಸಾಗರಹಳ್ಳಿ ಗ್ರಾಮವನ್ನು ಆವರಿಸಿಕೊಂಡು ವಾಯವ್ಯಕ್ಕೆ ಚಲಿಸಿ ಮೂಡಿಗಾನಹಳ್ಳಿ, ಕೆಂಪತಿಮ್ಮನಹಳ್ಳಿ ಗ್ರಾಮಗಳನ್ನು ಆವರಿಸಿಕೊಂಡು ದೊಡ್ಡಬಳ್ಳಾಪುರ ಮತ್ತು ಚಿಕ್ಕಬಳ್ಳಾಪುರ ತಾಲ್ಲೂಕುಗಳ ಗಡಿಗಳು ಸಂಧಿಸುವ ಜಾಗವನ್ನು ಸೇರುತ್ತದೆ. ಹೆಗ್ಗಡಿಹಳ್ಳಿ ಗ್ರಾಮದ ಆಗ್ನೇಯ ಮೂಲೆ ಸೇರಿ ಸದರಿ ಗ್ರಾಮದ ಉತ್ತರ ದಿಕ್ಕಿಗೆ ಚಲಿಸಿ, ದೊಡ್ಡಬಳ್ಳಾಪುರ ತಾಲ್ಲೂಕಿನ ತೂಬಗೆರೆ ಹೋಬಳಿಯಲ್ಲಿನ ಹೆಗ್ಗಡಿಹಳ್ಳಿ ಗ್ರಾಮದಿಂದ ಚಲಿಸುತ್ತಾ ಉತ್ತರಕ್ಕೆ ಚೆನ್ನಾಪುರ ಹಾಗೂ ಚಿಕ್ಕರಾಯಪ್ಪನಹಳ್ಳಿ ಗ್ರಾಮಗಳನ್ನು ಆವರಿಸಿಕೊಂಡು ದಕ್ಷಿಣಕ್ಕೆ ಚಲಿಸಿ ದೊಡ್ಡರಾಯಪ್ಪನಹಳ್ಳಿ ಗ್ರಾಮವನ್ನು ಆವರಿಸಿಕೊಂಡು ಹಾಗೂ ಮೇಲುಕೋಟೆ ಗ್ರಾಮದ ಈಶಾನ್ಯ ಮೂಲೆ ತಲುಪಿ ಪಶ್ಚಿಮಾಭಿಮುಖವಾಗಿ ಚಲಿಸಿ ಮೇಲುಕೋಟೆ ಗ್ರಾಮದ ವಾಯವ್ಯ ದಿಕ್ಕಿನಲ್ಲಿ ಮರಳಹಳ್ಳಿ ಗ್ರಾಮದ ಗಡಿಯಲ್ಲಿ ಉತ್ತರಾಭಿಮುಖವಾಗಿ ಚಲಿಸಿ ಮರಳಹಳ್ಳಿ, ಭೂಮೇನಹಳ್ಳಿ, ಯದ್ಲಹಳ್ಳಿ, ಕಲ್ಲುಕೋಟೆ ಹಾಗೂ ಮುಕ್ಕಡಿಘಟ್ಟ ಗ್ರಾಮವನ್ನು ಆವರಿಸಿಕೊಂಡು ಪಶ್ಚಿಮಕ್ಕೆ ಚಲಿಸುತ್ತಾ ಕಲ್ಲುಕೋಟೆ, ಲಕ್ಕಸಂದ್ರ, ಮಾಕಲತಿಮ್ಮನಹಳ್ಳಿ, ಮೂಗಚಿನ್ನಿನಹಳ್ಳಿ, ಗೆದ್ದಲಪಾಳ್ಯ, ಲಘುಮೇನಹಳ್ಳಿ, ಮೇಲಿನಜೋಗಿಹಳ್ಳಿ, ಗುಂಜೂರು ಗ್ರಾಮ ಆವರಿಸಿಕೊಂಡು ಪಶ್ಚಿಮಕ್ಕೆ ಗೌರಿಬಿದನೂರು ತಾಲ್ಲೂಕು ಹೊಂದಿಕೊಂಡಂತೆ ಸಾಸಲು ಹೋಬಳಿಯ ಮಾಕಳಿ ಗ್ರಾಮದಿಂದ ಚಲಿಸುತ್ತಾ, ಬೆನಕನಹಳ್ಳಿ, ಹೊಸಕೋಟೆ, ಹೊಸಹಳ್ಳಿ, ತೇಕಲಹಳ್ಳಿ, ಯರಮುದ್ದೇನಹಳ್ಳಿ, ದೇವಪಾಲ, ಆರೋಡಿ ಗ್ರಾಮದಿಂದ ನೈರುತ್ಯಕ್ಕೆ ಚಲಿಸಿ ಬನವತಿ ಗ್ರಾಮವನ್ನು ಅವರಿಕೊಂಡು, ಕಾಮಾಕ್ಷಿಹಳ್ಳಿ, ಗೌಡನಕುಂಟೆಯ ವಾಯುವ್ಯ ಮೂಲೆಯಲ್ಲಿ ದಕ್ಷಿಣಕ್ಕೆ ಚಲಿಸಿ ದಾದಗಟ್ಟಮಡುಗು, ಹಾರೋಹಳ್ಳಿ, ಶ್ರೀರಾಮನಹಳ್ಳಿ, ಮಾಚೇನಹಳ್ಳಿ, ಗರುಡಗಲ್ಲು, ಲಕ್ಕೇನಹಳ್ಳಿ, ನರಸಾಪುರ, ಬೈಯಪ್ಪನಹಳ್ಳಿ, ಅಂಕೋನಹಳ್ಳಿ ಅವರಿಸಿಕೊಂಡು ಕೊರಟಗೆರೆ ತಾಲ್ಲೂಕಿಗೆ ಹೊಂದಿಕೊಂಡಂತೆ ದೊಡ್ಡಬೆಳವಂಗಲ ಹೋಬಳಿಯ ಕಡತಿಪುರ, ಕಲ್ಲೇನಹಳ್ಳಿ, ಚಿಗರನಹಳ್ಳಿ, ದೊಡ್ಡಮಂಕನಾಳ, ಹುಲಿಕುಂಟೆ ಗ್ರಾಮಗಳನ್ನು ಆವರಿಸಿಕೊಂಡು ಅಪ್ಪಕರೇನಹಳ್ಳಿ ಗ್ರಾಮದ ಈಶಾನ್ಯ ಮೂಲೆಯಲ್ಲಿ ಪಶ್ಚಿಮಕ್ಕೆ ಚಲಿಸುತ್ತಾ, ಅಪ್ಪಕರೇನಹಳ್ಳಿ ಗ್ರಾಮವನ್ನು

ಆವರಿಸಿಕೊಂಡು ಪುನಃ ಆಗ್ನೇಯ ದಿಕ್ಕಿನ ಕಡೆ ಚಲಿಸುತ್ತಾ ನೆಲಮಂಗಲ ತಾಲ್ಲೂಕಿಗೆ ಹೊಂದಿಕೊಂಡಂತೆ ದೊಡ್ಡಬೆಳವಂಗಲ ಹೋಬಳಿಯ ಹುಲಿಕುಂಟೆ ಗ್ರಾಮದಿಂದ ಪುನಃ ಪೂರ್ವದ ಕಡೆ ಚಲಿಸುತ್ತಾ ಜೋಯಿಸ ಅಗ್ರಹಾರ, ತರಬನಹಳ್ಳಿ ಗ್ರಾಮಗಳನ್ನು ಆವರಿಸಿಕೊಂಡು ಕಸಘಟ್ಟ ಗ್ರಾಮದ ಪಶ್ಚಿಮದ ಗಡಿ ತಲುಪಿ ದಕ್ಷಿಣಾಭಿಮುಖವಾಗಿ ಚಲಿಸಿ ಕಸಘಟ್ಟ, ಹಂಬಲಗೆರೆ ಗ್ರಾಮಗಳನ್ನು ಆವರಿಸಿಕೊಂಡು ಹಂಬಲಗೆರೆ ಗ್ರಾಮದ ನೈರುತ್ಯ ಮೂಲೆಯಿಂದ ಪೂರ್ವಾಭಿಮುಖವಾಗಿ ಚಲಿಸಿ ಹಂಬಲಗೆರೆ, ಕಾರೇಪುರ, ದೊಡ್ಡಹೆಜ್ಜಾಜಿ, ಚಿಕ್ಕಹೆಜ್ಜಾಜಿ, ಹರಡಿಪುರ, ಬೋಕ್ಕಿಪುರ, ಕಲ್ಲುದೇವನಹಳ್ಳಿ, ಕುಂಟನಹಳ್ಳಿ ಗ್ರಾಮಗಳನ್ನು ಆವರಿಕೊಂಡು ದಕ್ಷಿಣಕ್ಕೆ ಚಲಿಸಿ ಕುಂಟನಹಳ್ಳಿ ಗ್ರಾಮದ ಆಗ್ನೇಯ ಮೂಲೆಯಲ್ಲಿ ದಕ್ಷಿಣಾಭಿಮುಖವಾಗಿ ಚಲಿಸಿ ಮಧುರೆ ಹೋಬಳಿಯ ಗೆಜ್ಜಗದಹಳ್ಳಿ, ಕರೀಂಸೊಣ್ಣೇನಹಳ್ಳಿ ಗ್ರಾಮವನ್ನು ಆವರಿಸಿಕೊಂಡು ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿಯ ಸೊಣ್ಣೇನಹಳ್ಳಿ, ಸೀರಸಂದ್ರ, ಬ್ಯಾತ ಹೆಸರಘಟ್ಟ ಗ್ರಾಸ್ ಫಾರಂ, ದಾಸನಹಳ್ಳಿ, ಹೆಸರಘಟ್ಟ ಗ್ರಾಮವನ್ನು ಆವರಿಸಿಕೊಂಡು ಹೆಸರಘಟ್ಟ ಗ್ರಾಮದ ಈಶಾನ್ಯ ಮೂಲೆಯಲ್ಲಿ ಪೂರ್ವಕ್ಕೆ ಚಲಿಸಿ, ಹೆಸರಘಟ್ಟ ರಿಸರ್ವಾಯರ್, ಮತ್ತೂಕುರು, ಕೋಲುವಾರಯನಹಳ್ಳಿ, ದಿಬ್ಬೂರು, ಚೊಕ್ಕನಹಳ್ಳಿ, ಅದ್ದೆವಿಶ್ವನಾಥಪುರ, ಶ್ರೀರಾಮನಹಳ್ಳಿ, ಸಾದೇನಹಳ್ಳಿ ಗ್ರಾಮಗಳನ್ನು ಆವರಿಸಿಕೊಂಡು, ಜಾಲ ಹೋಬಳಿಯ ತರಹುಣಸೆ, ಪಾಪನಹಳ್ಳಿ, ಬೈಯನಹಳ್ಳಿ, ಚೊಕ್ಕನಹಳ್ಳಿ ಗ್ರಾಮಗಳನ್ನು ಆವರಿಸಿಕೊಂಡು ಆಗ್ನೇಯದ ದಿಕ್ಕಿಗೆ ಚಲಿಸುತ್ತಾ ಕಾಡಿಗಾನಹಳ್ಳಿ, ಬಿಲ್ಲಮಾರನಹಳ್ಳಿ, ಹೊಸಹಳ್ಳಿ, ಬಾಗಲೂರು, ಮಹದೇವಕೊಡಿಗೇಹಳ್ಳಿ, ಮರಳುಕುಂಟೆ, ಮಾರಸಂದ್ರ ಗ್ರಾಮವನ್ನು ಆವರಿಸಿಕೊಂಡು ಮಾರಸಂದ್ರ ಗ್ರಾಮದ ಈಶಾನ್ಯ ಮೂಲೆಯಲ್ಲಿ ಪೂರ್ವಕ್ಕೆ ಚಲಿಸಿ ಚಲಮಕುಂಟೆ ಗ್ರಾಮವನ್ನು ಆವರಿಸುತ್ತಾ ಪ್ರಾರಂಭವಾದ ದೇವನಹಳ್ಳಿ ತಾಲ್ಲೂಕು, ಚನ್ನರಾಯಪಟ್ಟಣ ಹೋಬಳಿಯ ಹಂದ್ರಹಳ್ಳಿ ಗ್ರಾಮದ ಆಗ್ನೇಯ ಮೂಲೆಯನ್ನು ಸೇರುತ್ತದೆ.

ಮೇಲೆ ವಿವರಿಸಿದ ಗಡಿ ಪ್ರದೇಶದ ಒಳಗೆ ಬರುವ ಗ್ರಾಮಗಳು ಬಿಟ್ಟುಹೋಗಿದ್ದಲ್ಲಿ, ಅವುಗಳು ಸಹ ಈ ಸ್ಥಳೀಯ ಯೋಜನಾ ಪ್ರದೇಶದಲ್ಲಿ ಸೇರಿಕೊಳ್ಳುತ್ತವೆ.

**ಎನ್. ನರಸಿಂಹಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು)**

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– *IV-A* | ಬೆಂಗಳೂರು, ಗುರುವಾರ, ಮಾರ್ಚ್ ೩, ೨೦೧೬ (ಪಾಲ್ಗುಣ ೧೩, ಶಕ ವರ್ಷ ೧೯೩೭) | ನಂ. ೩೪೭ |
|---|---|---|
| *Part– IV-A* | *Bengaluru, Thursday, March 3, 2016 (Palguna 13, Shaka Varsha 1937)* | *No. 347* |


**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಿಆಸುಇ 90 ಸೇನಿಸಿ 2014, ಬೆಂಗಳೂರು, ದಿನಾಂಕ: 03.03.2016**

ಕರ್ನಾಟಕ ರಾಜ್ಯ ನಾಗರಿಕ ಸೇವೆಗಳ ಅಧಿನಿಯಮ, 1978ರ (1990ರ ಕರ್ನಾಟಕ ಅಧಿನಿಯಮ 14) ನಿಯಮ 8ರೊಂದಿಗೆ ಓದಲಾದ ನಿಯಮ 3ರ ಉಪ ನಿಯಮ (1) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966ಕ್ಕೆ ತಿದ್ದುಪಡಿ ಮಾಡಲು ಉದ್ದೇಶಿಸಿ ಮೇಲೆ ಹೇಳಿದ ಅಧಿನಿಯಮ 3ರ ಉಪನಿಯಮ 2ರ ಕಲಂ (ಎ)ನಲ್ಲಿ ಅಗತ್ಯಪಡಿಸಲಾದಂತೆ ಅದರಿಂದ ಬಾಧಿತರಾಗಬಹುದಾದ ಎಲ್ಲಾ ವ್ಯಕ್ತಿಗಳ ಮಾಹಿತಿಗಾಗಿ ಪ್ರಕಟಿಸಲಾಗಿದೆ ಮತ್ತು ಸದರಿ ಕರಡನ್ನು ಅದು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಹದಿನೈದು ದಿನಗಳ ತರುವಾಯ ಪರಿಗಣನೆಗೆ ತೆಗೆದುಕೊಳ್ಳಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಈ ಕರಡನ್ನು ಅಧಿಸೂಚನೆಗೆ ಸಂಬಂಧಿಸಿದಂತೆ, ಮೇಲೆ ನಿಗದಿಪಡಿಸಿದ ಅವಧಿಯು ಮುಕ್ತಾಯವಾಗುವುದಕ್ಕೆ ಮೊದಲು ಯಾರೇ ವ್ಯಕ್ತಿಯಿಂದ ಸ್ವೀಕರಿಸಬಹುದಾದ ಯಾವುದೇ ಆಕ್ಷೇಪಣೆ ಮತ್ತು ಸಲಹೆಯನ್ನು ರಾಜ್ಯ ಸರ್ಕಾರವು ಪರಿಗಣಿಸುವುದು. ಆಕ್ಷೇಪಣೆಗಳು ಹಾಗೂ ಸಲಹೆಗಳನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ವಿಧಾನಸೌಧ, ಬೆಂಗಳೂರು– 560 001 ಇವರಿಗೆ ಸಲ್ಲಿಸಬಹುದು.

**ಕರಡು ನಿಯಮಗಳು**

1. **ಹೆಸರು ಮತ್ತು ಪ್ರಾರಂಭ,–** (1) ಈ ನಿಯಮಗಳನ್ನು ಕರ್ನಾಟಕ ನಾಗರಿಕ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 2015 ಎಂದು ಕರೆಯತಕ್ಕದ್ದು.

   (2) ಈ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ನಿಯಮ 23 ಕ್ಕೆ ತಿದ್ದುಪಡಿ,–** ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 23ರ ಉಪನಿಯಮ (1)(ಡಿ) ಅಡಿಯಲ್ಲಿನ ಟಿಪ್ಪಣಿ–Iನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಗಾಯತ್ರಿ ಎಂ.ಆರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

## *PERSONEL AND ADMINISTRATIVE REFORMS SECRETARIAT*

## *NOTIFICATION*

***No. DPAR 90 SRC 2014, Bangalore, dated: 03.03.2016***

The draft of the following rules further to amend the Karnataka Government Civil Services (Conduct) Rules, 1966, which the Government of Karnataka proposes to make in exercise of the powers conferred by sub - section (1) of section 3 read with section 8 of the Karnataka State Civil Services Act, 1978 (Karnataka Act 14 of 1990) is hereby published as required by clause (a) of sub-section (2) of section 3 of the said Act, for the information of all persons likely to be affected thereby and notice is hereby given that the said draft will be taken into consideration after fifteen days from the date of its publication in the Official Gazette.

Any objection or suggestion, which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Department of Personnel and Administrative Reforms, Vidhana Soudha, Bangalore – 560 001.

### *DRAFT RULES*

1. ***Title and Commencement***,- (1) These rules may be called the Karnataka Civil Services (Conduct) (Amendment) Rules, 2015

   (2) They shall come into force from the date of their publication in the Official Gazette.
2. ***Amendment of Rule 23***,- In the Karnataka Civil Services (Conduct) Rules, 1966, in Rule 23, in sub-rule (1), after clause (d) Note-I shall be omitted.

By Order and in the name of the Governor of Karnataka

***Gayathri M.R***
Under Secretary to Government
Department of Personnel and
Administrative Reforms
(Service Rules-1)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 100 ಪ್ರತಿಗಳು)

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ– IV-A | ಬೆಂಗಳೂರು, ಗುರುವಾರ, ಮಾರ್ಚ್ ೩, ೨೦೧೬ (ಪಾಲ್ಗುಣ ೧೩, ಶಕ ವರ್ಷ ೧೯೩೭) | ನಂ. ೩೪೮ |
|---|---|---|
| *Part– IV-A* | *Bengaluru, Thursday, March 3, 2016 (Palguna 13, Shaka Varsha 1937)* | *No. 348* |

***KARNATAKA LEGISLATIVE ASSEMBLY SECRETARIAT***

***NOTIFICATION***

***No. KLA/LGA/01/Bill/2016, Bengaluru, Dated: 03.03.2016***

**ಕರ್ನಾಟಕ ವಿಧಾನ ಸಭೆ**
**ಹದಿನಾಲ್ಕನೇ ವಿಧಾನಸಭೆ**
**ಒಂಭತ್ತನೇ ಅಧಿವೇಶನ**

**ಬಾಲ್ಯ ವಿವಾಹ ನಿಷೇಧ (ಕರ್ನಾಟಕ ತಿದ್ದುಪಡಿ) ವಿಧೇಯಕ, 2016**
**(2016ರ ವಿಧಾನಸಭೆಯ ವಿಧೇಯಕ ಸಂಖ್ಯೆ – 01)**

ಬಾಲ್ಯ ವಿವಾಹ ನಿಷೇಧ ಅಧಿನಿಯಮ, 2006ನ್ನು ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಲ್ಲಿ ತಿದ್ದುಪಡಿ ಮಾಡಲು ಒಂದು ವಿಧೇಯಕ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ, ಬಾಲ್ಯ ವಿವಾಹ ನಿಷೇಧ ಅಧಿನಿಯಮ, 2006ನ್ನು (2007ರ ಕೇಂದ್ರ ಅಧಿನಿಯಮ 06) ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವಲ್ಲಿ ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗಲಿ, ಎಂದರೆ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.–** (1) ಈ ಅಧಿನಿಯಮವನ್ನು ಬಾಲ್ಯ ವಿವಾಹ ನಿಷೇಧ (ಕರ್ನಾಟಕ ತಿದ್ದುಪಡಿ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ರಾಜ್ಯ ಸರ್ಕಾರವು ಅಧಿಕೃತ ರಾಜ್ಯ ಪತ್ರದಲ್ಲಿ ಅಧಿಸೂಚನೆಯ ಮೂಲಕ ಗೊತ್ತುಪಡಿಸಬಹುದಾದ ಅಂಥ ದಿನಾಂಕದಂದು ಜಾರಿಗೆ ಬರತಕ್ಕದ್ದು.

**2. 3ನೇ ಪ್ರಕರಣದ ತಿದ್ದುಪಡಿ.–** ಬಾಲ್ಯ ವಿವಾಹ ಅಧಿನಿಯಮ, 2006ರ (2007ರ ಕೇಂದ್ರ ಅಧಿನಿಯಮ 06) (ಇಲ್ಲಿ ಇನ್ನುಮುಂದೆ ಮೂಲ ಅಧಿನಿಯಮವೆಂದು ಕರೆಯಲಾಗಿದೆ) 3ನೇ ಪ್ರಕರಣದ (1)ನೇ ಉಪಪ್ರಕರಣದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(1ಎ) (1)ನೇ ಉಪಪ್ರಕರಣದಲ್ಲಿ ಏನೇ ಒಳಗೊಂಡಿದ್ದರೂ, ಬಾಲ್ಯ ವಿವಾಹ ನಿಷೇಧ (ಕರ್ನಾಟಕ ತಿದ್ದುಪಡಿ) ಅಧಿನಿಯಮ, 2016 ಜಾರಿಗೆ ಬಂದ ದಿನಾಂಕದಂದು ಅಥವಾ ಆನಂತರ ಶಾಸ್ತ್ರೋಕ್ತವಾಗಿ ನೆರವೇರಿಸಲಾದ ಪ್ರತಿಯೊಂದು ಬಾಲ್ಯ ವಿವಾಹವು ಪ್ರಾರಂಭದಿಂದಲೇ ಅನೂರ್ಜಿತವಾಗತಕ್ಕದ್ದು."

**3. 9ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 9ನೇ ಪ್ರಕರಣದಲ್ಲಿ, "ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಕಠಿಣ ಕಾರಾವಾಸದಿಂದ" ಎಂಬ ಪದಗಳಿಗೆ "ಒಂದು ವರ್ಷಕ್ಕೆ ಕಡಿಮೆಯಿಲ್ಲದ ಆದರೆ ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಕಠಿಣ ಕಾರಾವಾಸದಿಂದ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

dining table irrespective of their thickness including the above items made of thermocol and plastic which use plastic micro beads in the State.

Provided that, the plastic used for the following purposes and circumstances are exempted from this notification;

a) The plastic carry bags manufactured exclusively for export purpose against any export orders in a plastic industry located in Special Economic Zone (SEZ) and Export Oriented Units (EOU).
b) The plastic bags which constitute or form an integral part of packaging in which goods are sealed prior to use at manufacturing/processing units.
c) The plastic bags and sheets used in Forestry and Horticulture nurseries against the orders from the Govt Departments or from the firms concerned.
d) The plastic used for packing of milk and milk products (dairy products).

2. That the following Officers shall enforce this direction in exercise of power conferred on them by law in their jurisdiction.
   a) The Commissioner, Joint Commissioners, Revenue Officers, all Health Officers and all Engineers of BBMP.
   b) All Deputy Commissioners of the districts.
   c) All Commissioners of City Corporations, Chief Officers, Health Officers and all Engineers of Urban Local Bodies.
   d) All Assistant Environmental Officers, Deputy Environmental Officers, Environmental Officers and Senior Environmental Officers of KSPCB.
   e) All Assistant Commissioners of Revenue Sub Divisions.
   f) Tahsildars of all Taluks.
   g) All officers of Commercial Tax Department.
   h) All officers of Department of Food and Civil supplies.
   i) The Controller, Deputy Controller and Regional Officers of Legal Metrology Department.
3. That the following officers shall take cognizance of offences and initiate legal action in case of noncompliance of this direction as per the powers conferred on them under section 19 of the Environment (Protection) Act, 1986 and to file complaint in the jurisdictional court of law on all violators.
   a) Secretary to Government (Ecology & Environment), Forest, Environment and Ecology Department.
   b) Chairman and Member Secretary, KSPCB.
   c) Deputy Commissioners of the Districts.
   d) Assistant Commissioners of Revenue Sub Divisions.
   e) Regional Officers of KSPCB.

**Explanation 1-** "Plastic" means any of the items mentioned in this direction made out of poly propylene (PP), non-woven poly propylene, multi layered co-extruder poly propylene, poly ethylene (PE), poly vinyl chloride (PVC), high and low density poly ethylene (HDPE & LDPE), poly styrene (PS) which is also called thermocol, poly amides (Nylon), poly terephthalate (PT), poly methyl methacrylate (PMM) and plastic micro beads.

**Explanation 2-** The word "carry bag" will have the same meaning that is provided in Rule 3 (b) of the Plastic Waste (Management and Handling) Rules, 2011. In this definition exemption is provided for plastic bag that constitute or form an integral part of packaging in which goods are sealed prior to use.

**Explanation 3-** Karnataka State Pollution Control Board shall be responsible for enforcement regarding the functions specified in clause (a) of Rule 4 of the Plastic Waste (Management and Handling) Rules, 2011 and Urban Local Bodies shall be responsible for enforcement regarding the functions specified in clause (b) of rule 4 of the said Rules;

**Explanation 4-** Officers as mentioned in Government of India's Notification No.S.O.394 (E) dated 16.04.1987 amended from time to time are authorized to file complaints against violation of directions included in this Notification under Section 19 of the Environment (Protection) Act, 1986.

By Order & in the name of the Governor of Karnataka,

**Mahendra Jain**
Additional Chief Secretary to Government,
Forest, Ecology and Environment Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೫೦೦ ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ– *III* | ಬೆಂಗಳೂರು, ಸೋಮವಾರ, ಮಾರ್ಚ್ ೧೪, ೨೦೧೬ (ಪಾಲ್ಗುಣ ೨೪, ಶಕ ವರ್ಷ ೧೯೩೭) | ನಂ. ೩೭೪ |
|---|---|---|
| ***Part– III*** | ***Bengaluru, Monday, March 14, 2016 (Palguna 24, Shaka Varsha 1937)*** | ***No. 374*** |


**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ತಿದ್ದುಪಡಿ ಅಧಿಸೂಚನೆ**

**ನಂ: ಚುನಾವಣೆ(4)ಸಿಆರ್(ಶಿಕಾರಿಪುರ)53/15–16, ದಿನಾಂಕ: 05 ಮಾರ್ಚ್ 2016**

ಕರ್ನಾಟಕ ರಾಜ್ಯ ಪತ್ರದ ದಿನಾಂಕ 4 ನೇ ಮೇ 2015 ರ ವಿಶೇಷ ಪತ್ರಿಕೆಯ ಭಾಗ–III (ನಂ 508) ರಲ್ಲಿ ಪ್ರಕಟವಾದಂತೆ ಈ ಕಛೇರಿಯ ಸಮ ಸಂಖ್ಯೆ ದಿನಾಂಕ 04 ನೇ ಮೇ 2015 ರಂದು ಹೊರಡಿಸಿರುವ ಅಧಿಸೂಚನೆಯಲ್ಲಿ ಮುದ್ರಣ ದೋಷಗಳು ಕಂಡುಬಂದಿರುವುದರಿಂದ ಸದರಿ ದೋಷಗಳನ್ನು ಈ ಕೆಳಕಾಣಿಸಿದಂತೆ ತಿದ್ದುಪಡಿಮಾಡಿ ಓದಿಕೊಳ್ಳತಕ್ಕದ್ದು.

**ತಾಲ್ಲೂಕಿನ ಹೆಸರು: ಶಿಕಾರಿಪುರ** **ಗ್ರಾಮ ಪಂಚಾಯಿತಿಯ ಹೆಸರು: 11–ತರಲಘಟ್ಟ**

| ಕ್ರಮ ಸಂಖ್ಯೆ | ಗ್ರಾಮ ಪಂಚಾಯತಿ ಹೆಸರು | ಪುಟ ಸಂಖ್ಯೆ | ಕೋಷ್ಟಕದ ವಿವರ | ಹಾಲಿ ಮುದ್ರಿತವಾಗಿರುವುದು | ತಿದ್ದುಪಡಿಯಂತೆ ಓದಿಕೊಳ್ಳುವುದು |
|---|---|---|---|---|---|
| 1 | 2 | 4 | 3 | 5 | 6 |
| 1 | **11–ತರಲಘಟ್ಟ** | 28 | ಕೋಷ್ಟಕ– II ರ ಪರಿಶಿಷ್ಟ ಪಂಗಡಗಳ ಮೀಸಲಾತಿ ಸ್ಥಾನಗಳಲ್ಲಿ ಕ್ರ.ಸಂ.2 ರಲ್ಲಿ ಕಾಲಂ 2(ಅ) ಮತ್ತು 3(ಅ) ನಲ್ಲಿನ ಪ್ರಾದೇಶಿಕ ಚುನಾವಣಾ ಕ್ಷೇತ್ರದ ಹೆಸರು | ಭದ್ರಾಪುರ–2 | ಭದ್ರಾಪುರ–1 |

ವಿ.ಪಿ.ಇಕ್ಕೇರಿ
ಜಿಲ್ಲಾಧಿಕಾರಿ
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) 50 ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ– *I* | ಬೆಂಗಳೂರು, ಮಂಗಳವಾರ, ಮಾರ್ಚ್ ೧೫, ೨೦೧೬ (ಫಾಲ್ಗುಣ ೨೫, ಶಕ ವರ್ಷ ೧೯೩೭) | ನಂ. ೩೭೫ |
|---|---|---|
| ***Part– I*** | ***Bengaluru, Tuesday, March 15, 2016 (Palguna 25, Shaka Varsha 1937)*** | ***No. 375*** |


**ಕರ್ನಾಟಕ ಸರ್ಕಾರದ ನಡವಳಿಗಳು**

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ರಾಜ್ಯದಲ್ಲಿ ಒಂದು ಪ್ರತ್ಯೇಕ **ಭ್ರಷ್ಟಾಚಾರ ನಿಗ್ರಹ ದಳ** (Anti-Corruption Bureau), ಸರ್ಕಾರದ ಎಲ್ಲಾ ಇಲಾಖೆಗಳಲ್ಲಿ **ಜಾಗೃತ ಕೋಶ** (Vigilance Cells) ಹಾಗೂ ಜಾಗೃತ ವ್ಯವಸ್ಥೆಯ ಮೇಲುಸ್ತುವಾರಿಗೆ **ಜಾಗೃತ ಸಲಹಾ ಮಂಡಳಿ**ಯನ್ನು (Vigilance Advisory Board) ಸೃಜಿಸುವ ಕುರಿತು.

**ಓದಲಾಗಿದೆ :–**

1. ಅಧಿಸೂಚನೆ ಸಂಖ್ಯೆ:ಹೆಚ್‌ಡಿ 286 ಪಿಇಜಿ 90, ದಿನಾಂಕ: 06.02.1991.
2. ಅಧಿಸೂಚನೆ ಸಂಖ್ಯೆ:ಹೆಚ್‌ಡಿ 292 ಪಿಇಜಿ 2000, ದಿನಾಂಕ: 08.05.2002.
3. ಅಧಿಸೂಚನೆ ಸಂಖ್ಯೆ:ಹೆಚ್‌ಡಿ 334 ಪಿಇಜಿ 2002, ದಿನಾಂಕ: 05.12.2002.
4. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು, ಇವರ ಪತ್ರ ಸಂಖ್ಯೆ:ಆರ್.ಎಲ್.ಎನ್.(1)87/2015–16, ದಿನಾಂಕ:03.02.2016.

**ಪ್ರಸ್ತಾವನೆ:**

ಆಡಳಿತ ನಿರ್ವಹಣೆಯಲ್ಲಿ ನಡೆದ ಭ್ರಷ್ಟಾಚಾರ, ಸ್ವಜನ ಪಕ್ಷಪಾತ ಮತ್ತು ಅಶಿಸ್ತಿನ ಪ್ರಕರಣಗಳೂ ಸೇರಿದಂತೆ, ಆಡಳಿತ ಕ್ರಮಗಳಲ್ಲಿ ಬಂದ ಫಿರ್ಯಾದುಗಳ ಬಗ್ಗೆ ವಿಚಾರಣೆ ನಡೆಸುವ ಮೂಲಕ, ಸಾರ್ವಜನಿಕ ಆಡಳಿತ ಗುಣಮಟ್ಟವನ್ನು ಸುಧಾರಿಸುವ ಸಲುವಾಗಿ ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ನ್ನು ಜಾರಿಗೆ ತರಲಾಗಿದೆ. ಕರ್ನಾಟಕ ಲೋಕಾಯುಕ್ತ ಸಂಸ್ಥೆಯು ಆಡಳಿತ, ವಿಚಾರಣೆ, ತಾಂತ್ರಿಕ ಮತ್ತು ಪೊಲೀಸ್ ವಿಭಾಗಗಳನ್ನು ಒಳಗೊಂಡಿದೆ.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಅಧಿಸೂಚನೆಯನ್ವಯ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ಸಲುವಾಗಿ ಸದರಿ ಅಧಿನಿಯಮದ ಪ್ರಕರಣ 17ರನ್ವಯ ತನಿಖೆ ನಡೆಸುವ ಅಧಿಕಾರವನ್ನು ಕರ್ನಾಟಕ ಲೋಕಾಯುಕ್ತದಲ್ಲಿನ ಎಲ್ಲಾ ಪೊಲೀಸ್ ಇನ್ಸ್‌ಪೆಕ್ಟರ್‌ಗಳಿಗೆ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ಮತ್ತು (3)ರಲ್ಲಿ ಓದಲಾದ ಅಧಿಸೂಚನೆಗಳನ್ವಯ ಕರ್ನಾಟಕ ಲೋಕಾಯುಕ್ತದಲ್ಲಿನ ಪೊಲೀಸ್ ಇನ್ಸ್‌ಪೆಕ್ಟರ್‌ಗಳ ಕಚೇರಿಗಳನ್ನು ದಂಡ ಪ್ರಕ್ರಿಯಾ ಸಂಹಿತೆಯ ಪ್ರಕರಣ (2)ರಡಿ ಪೊಲೀಸ್ ಠಾಣೆಗಳೆಂದು ಘೋಷಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಪತ್ರದಲ್ಲಿ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರು (ಡಿ.ಜಿ.&ಐ.ಜಿ.ಪಿ), ಶ್ರೀ ಸಿ.ರಂಗಸ್ವಾಮಯ್ಯ ವಿರುದ್ಧ ಕರ್ನಾಟಕ ಲೋಕಾಯುಕ್ತ (1998)6 SCC 66) ಪ್ರಕರಣದಲ್ಲಿ ಮಾನ್ಯ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ ಹಿನ್ನೆಲೆಯಲ್ಲಿ, ಭ್ರಷ್ಟಾಚಾರ ತಡೆ ಅಧಿನಿಯಮ, 1988ರ ಜಾರಿಗೆ ಸಂಬಂಧಿಸಿದಂತೆ ಕೆಲವು ಮಾರ್ಪಾಡುಗಳನ್ನು ಮಾಡುವ ಅವಶ್ಯಕತೆ ಇದ್ದು, ರಾಜ್ಯದಲ್ಲಿ ಒಂದು ಭ್ರಷ್ಟಾಚಾರ ನಿಗ್ರಹ ದಳವನ್ನು (Anti-Corruption Bureau) (ACB) ಸೃಜಿಸುವ ಬಗ್ಗೆ ಪ್ರಸ್ತಾಪಿಸಿದ್ದಾರೆ. ಡಿ.ಜಿ.&ಐ.ಜಿ.ಪಿ.ರವರು ಪ್ರಸ್ತುತ ಕರ್ನಾಟಕ ಲೋಕಾಯುಕ್ತದ ಪೊಲೀಸ್ ವಿಭಾಗದ ಅಧಿಕಾರಿಗಳ ಕರ್ತವ್ಯಗಳನ್ನು ಕೆಳಕಂಡ ಎರಡು ರೀತಿಯಲ್ಲಿ ವರ್ಗೀಕರಿಸಬಹುದಾಗಿದೆಯೆಂದು ತಿಳಿಸಿದ್ದಾರೆ:–

1) ಪೊಲೀಸ್ ವಿಭಾಗವನ್ನು ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರ ಪ್ರಕರಣ 15(1)ರ ಪ್ರಕಾರ, ಪ್ರಾಥಮಿಕವಾಗಿ ಲೋಕಾಯುಕ್ತರಿಗೆ ಲೋಕಾಯುಕ್ತ ಕಾಯ್ದೆಯನ್ನು ಜಾರಿ ಮಾಡುವಲ್ಲಿ ನೆರವಾಗುವುದು;

2) ಕರ್ನಾಟಕ ಸರ್ಕಾರವು ಹಲವಾರು ಆದೇಶಗಳಿಂದ ಲೋಕಾಯುಕ್ತದಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್‌ಗಳ ಕಾರ್ಯಾಲಯಗಳನ್ನು ಪೊಲೀಸ್ ಠಾಣೆಗಳೆಂದು ಘೋಷಿಸಿದ್ದು, ಪೊಲೀಸ್ ಅಧಿಕಾರಿಗಳು ಭ್ರಷ್ಟಾಚಾರ ತಡೆ ಅಧಿನಿಯಮ, 1988ರಡಿ ದಾಖಲಾದ ಪ್ರಕರಣಗಳನ್ನು ತನಿಖೆ ಮಾಡುವುದು. ಈ ಪ್ರಕರಣಗಳ ತನಿಖೆಯು ಲೋಕಾಯುಕ್ತರ ವ್ಯಾಪ್ತಿಯಿಂದ ಹೊರತಾಗಿದ್ದು, ಈ ಬಗ್ಗೆ ಸರ್ಕಾರವು ಕೆಲವೊಂದು ಆದೇಶಗಳನ್ನು ಹೊರಡಿಸಿರುತ್ತದೆ.

ಪೊಲೀಸ್ ಅಧಿಕಾರಿಗಳ ಈ ದ್ವಿಮುಖ ಕರ್ತವ್ಯಗಳಿಂದಾಗಿ ಅಧಿಕಾರಗಳು ಒಂದನ್ನೊಂದು ಅತಿಕ್ರಮಿಸುತ್ತಿದ್ದು (overlap), ಕೆಲವು ಗೊಂದಲಗಳು ಏರ್ಪಟ್ಟಿವೆ. ಪೊಲೀಸ್ ವಿಭಾಗದ ಅಧಿಕಾರಿಗಳು ತನಿಖೆ ನಡೆಸುವ ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆಯ ಪ್ರಕರಣಗಳನ್ನು ಮೇಲುಸ್ತುವಾರಿ ಮಾಡುವ ಪ್ರಕ್ರಿಯೆಗೆ ಯಾವುದೇ ಅನುಮೋದಿಸಲ್ಪಟ್ಟ ವ್ಯವಸ್ಥೆ ಇರುವುದಿಲ್ಲ. ಪ್ರಸ್ತುತ, ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆಯಡಿ ತನಿಖೆ ಮಾಡುವ ಪೊಲೀಸ್ ಅಧಿಕಾರಿಗಳ ಮೇಲೆ ಆಡಳಿತಾತ್ಮಕ ಹಾಗೂ ಶಿಸ್ತಿನ ಕ್ರಮ ತೆಗೆದುಕೊಳ್ಳುವ ಅಧಿಕಾರವು ಕರ್ನಾಟಕ ಲೋಕಾಯುಕ್ತ ಕಾಯ್ದೆ, 1984ರ ಪ್ರಕರಣ 15(1) ಸಹವಾಚನ 15(4)ರಲ್ಲಿ ಲೋಕಾಯುಕ್ತರಿಗೆ ಇದ್ದು, ಇದು ಪೊಲೀಸ್ ಕಾಯ್ದೆಯ ಅಧ್ಯಾಯ 2ರ ಕಲಂ 3ಕ್ಕೆ ತದ್ವಿರುದ್ಧವಾಗುವುದರಿಂದ, ಈ ದ್ವಿಮುಖ ಕರ್ತವ್ಯಗಳ ಹೊಣೆಯನ್ನು ಕೊನೆಗೊಳಿಸುವುದು ಅವಶ್ಯಕವೆಂದೂ; ಈ ಹಿಂದೆ ಲೋಕಾಯುಕ್ತದಲ್ಲಿನ ಎಲ್ಲಾ ಪೊಲೀಸ್ ಇನ್ಸ್‌ಪೆಕ್ಟರ್‌ಗಳಿಗೆ ತನಿಖೆ ನಡೆಸಲು ಅಧಿಕಾರವನ್ನು ನೀಡಿರುವ ಹಾಗೂ ಪೊಲೀಸ್ ಇನ್ಸ್‌ಪೆಕ್ಟರ್‌ಗಳ ಕಚೇರಿಗಳನ್ನು ಪೊಲೀಸ್ ಠಾಣೆಗಳೆಂದು ಘೋಷಿಸಿರುವ ಅಧಿಸೂಚನೆಗಳನ್ನು ಹಿಂಪಡೆದು ಹೊಸ ಅಧಿಸೂಚನೆಗಳನ್ನು ಹೊರಡಿಸಬೇಕೆಂದೂ ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಕರ್ನಾಟಕ ಲೋಕಾಯುಕ್ತದಲ್ಲಿ ಪ್ರಸ್ತುತ ಇರುವ ಪೊಲೀಸ್ ವಿಭಾಗವು ಕೇವಲ ಲೋಕಾಯುಕ್ತರಿಗೆ ಲೋಕಾಯುಕ್ತ ಕಾಯ್ದೆಯನ್ನು ಪರಿಣಾಮಕಾರಿಯಾಗಿ ಜಾರಿ ಮಾಡಲು ನೆರವು ನೀಡಲು ಸೀಮಿತವಾಗಲು ಪ್ರಸ್ತಾಪಿಸಿದ್ದಾರೆ. ಅದರಂತೆ, ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಜಾರಿಗೊಳಿಸಲು ಹಾಗೂ ಪ್ರಕರಣಗಳನ್ನು ಸ್ವತಂತ್ರವಾಗಿ ತನಿಖೆಯನ್ನು ಮಾಡಲು **'Anti Corruption Bureau' (ACB)**ಯನ್ನು ರಚಿಸುವಂತೆ ಮತ್ತು ಈ ಘಟಕದಡಿಯಲ್ಲಿ ಪೋಲಿಸ್ ಮುಖ್ಯಸ್ಥರು ಹಾಗೂ ಸರ್ಕಾರವು ವಹಿಸುವ ಪ್ರಕರಣಗಳನ್ನು ಸ್ವತಂತ್ರವಾಗಿ ತನಿಖೆ ಮಾಡಲು ಅಧಿಕಾರ ನೀಡಬೇಕೆಂದು ಸರ್ಕಾರವನ್ನು ಕೋರಿದ್ದಾರೆ.

ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಕರ್ನಾಟಕ ಲೋಕಾಯುಕ್ತದ ಪೊಲೀಸ್ ವಿಭಾಗದ ತನಿಖೆ ನಡೆಸುವ ಸ್ವತಂತ್ರ ರೂಪದ ಅಧಿಕಾರ ಕುರಿತಂತೆ ಮಾನ್ಯ ಸರ್ವೋಚ್ಛ ನ್ಯಾಯಾಲಯವು ಶ್ರೀ ಸಿ.ರಂಗಸ್ವಾಮಯ್ಯ ವಿರುದ್ಧ ಕರ್ನಾಟಕ ಲೋಕಾಯುಕ್ತ ಪ್ರಕರಣದಲ್ಲಿ (1998)6 SCC 66) ಪ್ರಚುರಪಡಿಸಿರುವ ಕಾನೂನು; ಕರ್ನಾಟಕ ಉಚ್ಛ ನ್ಯಾಯಾಲಯದ ವಿಭಾಗೀಯ ಪೀಠವು ಮುಖ್ಯ ಕಾರ್ಯದರ್ಶಿ ಮತ್ತು ಇತರರು ವಿರುದ್ಧ ಬಸವರಾಜ ಗುಡ್ಡಪ್ಪ ಮಳಿಗೇರ ಪ್ರಕರಣ ಹಾಗೂ ಇತರ ಪ್ರಕರಣಗಳಲ್ಲಿ ನೀಡಿರುವ ತೀರ್ಪುಗಳನ್ವಯ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

ಪ್ರಸ್ತುತ, ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯವು ಕ್ರಿಮಿನಲ್ ಅರ್ಜಿ ಸಂಖ್ಯೆ:5378/2014, 5839/2014 ಮತ್ತು 4230/2015 ಪ್ರಕರಣಗಳನ್ನು ಒಗ್ಗೂಡಿಸಿದಂತೆ ಕ್ರಿಮಿನಲ್ ಅರ್ಜಿ ಸಂಖ್ಯೆ:2653/2015, ಡಾ:ವಿ.ಎಲ್. ನಂದೀಶ್ ಮತ್ತು ಇತರರು ವಿರುದ್ಧ ರಾಜ್ಯ ಸರ್ಕಾರ ಮತ್ತು ಇತರರು ಪ್ರಕರಣಗಳನ್ನು ಪರಿಶೀಲಿಸುತ್ತಿದ್ದು, ದಿ:08.02.2016ರಂದು ನೀಡಿರುವ ಮಧ್ಯಂತರ ಆದೇಶದಲ್ಲಿ ಮಾನ್ಯ ನ್ಯಾಯಾಲಯವು ರಾಜ್ಯದ ಪ್ರತಿಯೊಂದು ಇಲಾಖೆಯಲ್ಲಿ ಜಾಗೃತ ಕೋಶವನ್ನು ಸ್ಥಾಪಿಸುವ ಅಗತ್ಯವಿದ್ದು; ಇದು ಲೋಕಾಯುಕ್ತ ಪೊಲೀಸರ ಹೊರೆಯನ್ನು ಕಡಿಮೆ ಮಾಡುವುದಲ್ಲದೇ, ಸರ್ಕಾರದ ವಿವಿಧ ಇಲಾಖೆಗಳ ಪ್ರತಿಯೊಂದು ಹಂತದಲ್ಲಿ ಭ್ರಷ್ಟಾಚಾರದ ವಿರುದ್ಧ ಕಾರ್ಯನಿರ್ವಹಿಸಲು ಇಲಾಖೆಯನ್ನು ಹುರಿದುಂಬಿಸಲಿದ್ದು, ಕೇಂದ್ರ ಸರ್ಕಾರವು ಅಳವಡಿಸಿಕೊಂಡಿರುವ ಮಾದರಿಯಲ್ಲಿ ಪ್ರತಿ ಇಲಾಖೆಯಲ್ಲಿ ಜಾಗೃತ ಕೋಶಗಳನ್ನು ಸ್ಥಾಪಿಸಲು ರಾಜ್ಯ ಸರ್ಕಾರವು ಪರಿಶೀಲಿಸಬೇಕೆಂದು ಹೇಳಿದೆ.

ಈ ಹಿನ್ನೆಲೆಯಲ್ಲಿ, ಆಡಳಿತಯಂತ್ರದ ಅನುಚಿತ ಕಾರ್ಯನಿರ್ವಹಣೆಯನ್ನು ತಡೆಗಟ್ಟಿ, ಆಡಳಿತದ ಗುಣಮಟ್ಟವನ್ನು ಉತ್ತಮಪಡಿಸುವ ದೃಷ್ಟಿಯಿಂದ ರಾಜ್ಯದಲ್ಲಿ ಕರ್ನಾಟಕ ಲೋಕಾಯುಕ್ತ ಸಂಸ್ಥೆಯ ಜೊತೆಗೆ ಹೆಚ್ಚುವರಿಯಾಗಿ ಬಲಿಷ್ಠ ಮತ್ತು ಪರಿಣಾಮಕಾರಿ ಜಾಗೃತ ವ್ಯವಸ್ಥೆಯನ್ನು ಹೊಂದುವ ಅವಶ್ಯಕತೆಯನ್ನು ಸರ್ಕಾರವು ಮನಗಂಡಿದೆ. ಅದರಂತೆ, ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಅನುಷ್ಠಾನಗೊಳಿಸುವ ಹೆಚ್ಚುವರಿ ಜವಾಬ್ದಾರಿಯಿಂದ ಕರ್ನಾಟಕ ಲೋಕಾಯುಕ್ತದ ಪೊಲೀಸ್ ವಿಭಾಗವನ್ನು ವಿಮುಕ್ತಿಗೊಳಿಸಲು ತೀರ್ಮಾನಿಸಲಾಗಿದೆ. ಹಾಗೂ ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರಡಿ ಸ್ವತಂತ್ರವಾಗಿ ಮತ್ತು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಲೋಕಾಯುಕ್ತರೊಂದಿಗೆ ಭ್ರಷ್ಟಾಚಾರ ತಡೆ ಅಧಿನಿಯಮವನ್ನು ರಾಜ್ಯದಲ್ಲಿ ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ **'ಭ್ರಷ್ಟಾಚಾರ ನಿಗ್ರಹ ದಳ'**ವನ್ನು (Anti Corruption Bureau); ಸರ್ಕಾರದ ಎಲ್ಲಾ ಇಲಾಖೆಗಳಲ್ಲಿ **ಜಾಗೃತ ಕೋಶ**ಗಳನ್ನು

(Vigilance Cells); ಹಾಗೂ ಜಾಗೃತ ವ್ಯವಸ್ಥೆಯ ಮೇಲುಸ್ತುವಾರಿಗೆ **ಜಾಗೃತ ಸಲಹಾ ಮಂಡಳಿ**ಯನ್ನು (Vigilance Advisory Board) ಸೃಜಿಸಲು ಸರ್ಕಾರವು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 14 ಸೇಲೋಯು 2016, ಬೆಂಗಳೂರು, ದಿನಾಂಕ: 14.03.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಪ್ರಕರಣಗಳನ್ನು ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ **'ಭ್ರಷ್ಟಾಚಾರ ನಿಗ್ರಹ ದಳ'**ವನ್ನು (Anti Corruption Bureau) ಈ ಕೆಳಕಂಡ ಹುದ್ದೆಗಳೊಂದಿಗೆ ಸೃಜಿಸಲಾಗಿದೆ:–

| **ಕ್ರಮ ಸಂಖ್ಯೆ** | **ಹುದ್ದೆಗಳ ಪದನಾಮ** | **ಹುದ್ದೆಗಳ ಸಂಖ್ಯೆ** |
|---|---|---|
| 1. | ಅಪರ ಪೊಲೀಸ್ ಮಹಾನಿರ್ದೇಶಕರು (ADGP) | 01 |
| 2. | ಪೊಲೀಸ್ ಮಹಾನಿರೀಕ್ಷಕರು (IGP) | 01 |
| 3. | ಪೊಲೀಸ್ ಅಧೀಕ್ಷಕರು (SP) | 10 |
| 4. | ಪೊಲೀಸ್ ಉಪಾಧೀಕ್ಷಕರು (DySP) | 35 |
| 5. | ಪೊಲೀಸ್ ನಿರೀಕ್ಷಕರು (PI) | 75 |
| 6. | ಹೆಡ್ ಕಾನ್ಸ್‌ಟೇಬಲ್/ಪೊಲೀಸ್ ಕಾನ್ಸ್‌ಟೇಬಲ್ (HC/PC) | 200 |
| | **ಒಟ್ಟು** | **322** |

2. **'ಭ್ರಷ್ಟಾಚಾರ ನಿಗ್ರಹ ದಳ'**ವು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಒಟ್ಟಾರೆ ಮೇಲ್ವಿಚಾರಣೆಯಡಿ ಕಾರ್ಯನಿರ್ವಹಿಸುವುದು. ಭ್ರಷ್ಟಾಚಾರ ನಿಗ್ರಹ ದಳಕ್ಕೆ ಅವಶ್ಯಕ ಆಡಳಿತಾತ್ಮಕ ಬೆಂಬಲ ನೀಡುವ ಸಲುವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಲ್ಲಿ ಸರ್ಕಾರದ ಕಾರ್ಯದರ್ಶಿ ದರ್ಜೆಯ ಒಂದು ಹುದ್ದೆಯನ್ನು ಸೃಜಿಸಿ, ಅವರ ನೇತೃತ್ವದಲ್ಲಿ ಒಂದು **'ಜಾಗೃತ ವಿಭಾಗ'**ವನ್ನು (Vigilance Wing) ರಚಿಸಲಾಗಿದೆ. ಸಿ.ಆ.ಸು.ಇಲಾಖೆಯ ಜಾಗೃತ ವಿಭಾಗದ ಕಾರ್ಯದರ್ಶಿಯವರು ಮುಖ್ಯ ಕಾರ್ಯದರ್ಶಿಯವರ ಮುಖೇನ ಮಾನ್ಯ ಮುಖ್ಯ ಮಂತ್ರಿಯವರಿಗೆ ವರದಿ ಮಾಡುವುದು.

3. ರಾಜ್ಯದಲ್ಲಿನ ಭ್ರಷ್ಟಾಚಾರ ನಿಗ್ರಹ ದಳದ ಕಛೇರಿಗಳನ್ನು ದಂಡ ಪ್ರಕ್ರಿಯಾ ಸಂಹಿತೆ, 1973ರ ಪ್ರಕರಣ 2ರಡಿ ಪೊಲೀಸ್ ಠಾಣೆಗಳೆಂದು ಘೋಷಿಸಲು ಮತ್ತು ಭ್ರಷ್ಟಾಚಾರ ತಡೆ ಅಧಿನಿಯಮ, 1988ರ ಪ್ರಕರಣ 17ರಡಿ ತನಿಖೆ ನಡೆಸಲು ಪೊಲೀಸ್ ಉಪಾಧೀಕ್ಷಕರ (DySP) ದರ್ಜೆಗಿಂತ ಕಡಿಮೆಯಿಲ್ಲದ ಪೊಲೀಸ್ ಅಧಿಕಾರಿಗಳಿಗೆ ಅಧಿಕಾರ ನೀಡಲು ಪ್ರತ್ಯೇಕ ಅಧಿಸೂಚನೆಗಳನ್ನು ಹೊರಡಿಸಲಾಗುವುದು.

4. ಸಮವರ್ತಿಯಾಗಿ ಕರ್ನಾಟಕ ಲೋಕಾಯುಕ್ತದ ಪೊಲೀಸ್ ವಿಭಾಗಕ್ಕೆ ಭ್ರಷ್ಟಾಚಾರ ತಡೆ ಅಧಿನಿಯಮದಡಿ ತನಿಖೆ ನಡೆಸಲು ನೀಡಿರುವ ಅಧಿಕಾರವನ್ನು ಮತ್ತು ದಂಡ ಪ್ರಕ್ರಿಯಾ ಸಂಹಿತೆಯಡಿ ಕರ್ನಾಟಕ ಲೋಕಾಯುಕ್ತದ ಪೊಲೀಸ್ ವಿಭಾಗವನ್ನು ಪೊಲೀಸ್ ಠಾಣೆಗಳೆಂದು ಘೋಷಿಸಿರುವ ಅಧಿಸೂಚನೆಗಳನ್ನು ಹಿಂಪಡೆಯಲು ಪ್ರತ್ಯೇಕವಾಗಿ ಅಧಿಸೂಚನೆಗಳನ್ನು ಹೊರಡಿಸಲಾಗುವುದು.

5. ಸಾರ್ವಜನಿಕ ನೌಕರನು ತನ್ನ ಅಧಿಕೃತ ಕಾರ್ಯನಿರ್ವಹಣೆಯಲ್ಲಿ ಕೈಗೊಳ್ಳುವ ನಿರ್ಧಾರ ಅಥವಾ ಮಾಡುವ ಶಿಫಾರಸ್ಸುಗಳ ವಿರುದ್ಧ ಭ್ರಷ್ಟಾಚಾರ ನಿಗ್ರಹ ದಳವು ನೇಮಕಾತಿ ಪ್ರಾಧಿಕಾರದ ಪೂರ್ವಾನುಮತಿ ಇಲ್ಲದೆ ತನಿಖೆ ಪ್ರಾರಂಭಿಸಲು ಅವಕಾಶವಿರುವುದಿಲ್ಲ.

6. ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ರಡಿ ತನಿಖೆ ಮತ್ತು ಅಭಿಯೋಜನೆಗಾಗಿ ಬಾಕಿ ಇರುವ ಪ್ರಕರಣಗಳನ್ನು ಹೊಸದಾಗಿ ಸೃಜಿಸಿರುವ ಭ್ರಷ್ಟಾಚಾರ ನಿಗ್ರಹ ದಳಕ್ಕೆ ವರ್ಗಾಯಿಸುವುದು; ಮತ್ತು ಈ ವರ್ಗಾವಣೆಯನ್ನು ದಂಡ ಪ್ರಕ್ರಿಯಾ ಸಂಹಿತೆ ಮತ್ತು ಭ್ರಷ್ಟಾಚಾರ ತಡೆ ಅಧಿನಿಯಮದಡಿ ಸುಸಂಬದ್ಧ ಅಧಿಸೂಚನೆಗಳನ್ನು ಹೊರಡಿಸಿದ ನಂತರ ವ್ಯವಸ್ಥಿತವಾಗಿ ಮಾಡುವುದು.

7. ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಗಳನ್ನೊಳಗೊಂಡಂತೆ ನಿರ್ದೇಶನಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗು ಎಲ್ಲಾ ಶಾಸನಬದ್ಧ ಸಂಸ್ಥೆಗಳು ತಮ್ಮ ಇಲಾಖೆ/ಸಂಸ್ಥೆಗಳಲ್ಲಿ ಒಂದು **ಜಾಗೃತ ಕೋಶ**ವನ್ನು ಸೃಜಿಸುವಂತೆ ಆದೇಶಿಸಲಾಗಿದೆ. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಜಾಗೃತ ವಿಭಾಗವು ಈ ಜಾಗೃತ ಕೋಶಗಳ ಕಾರ್ಯನಿರ್ವಹಣೆಯ ಮೇಲ್ವಿಚಾರಣೆಯನ್ನು ಮಾಡುವುದು ಮತ್ತು ಮುಖ್ಯಮಂತ್ರಿಯವರ ಅನುಮೋದನೆಯೊಂದಿಗೆ ಪ್ರತ್ಯೇಕವಾಗಿ ಹೊರಡಿಸಲಾಗುವ ವಿವರವಾದ ಸೂಚನೆಗಳಡಿಯಲ್ಲಿ ಜಾಗೃತ ಕಾರ್ಯವನ್ನು ಕೈಗೊಳ್ಳುವುದು.

8. ಭ್ರಷ್ಟಾಚಾರ ನಿಗ್ರಹ ದಳವು ಪೊಲೀಸ್ ಮಹಾನಿರೀಕ್ಷಕರ (IGP) ದರ್ಜೆಗಿಂತ ಕಡಿಮೆಯಿಲ್ಲದ ಅಧಿಕಾರಿಯವರ ನೇತೃತ್ವದಲ್ಲಿ ಆಂತರಿಕ ಜಾಗೃತ ವಿಭಾಗವನ್ನು ಹೊಂದುವುದು ಮತ್ತು ಇವರು ನೇರವಾಗಿ ಅಪರ ಪೊಲೀಸ್ ಮಹಾನಿರ್ದೇಶಕರು, ಭ್ರಷ್ಟಾಚಾರ ನಿಗ್ರಹ ದಳ, ಇವರಿಗೆ ವರದಿ ಮಾಡುವಂತೆ ಆದೇಶಿಸಿದೆ. ಮುಂದುವರೆದು ಆಂತರಿಕ ಜಾಗೃತ ವಿಭಾಗವು ಭ್ರಷ್ಟಾಚಾರ ನಿಗ್ರಹ ದಳದ ಅಧಿಕಾರಿಗಳ ವಿರುದ್ಧದ ದೂರುಗಳು/ಆರೋಪಗಳು/ಕುಂದುಕೊರತೆಗಳನ್ನು ಪರಿಶೀಲಿಸುವುದು ಮತ್ತು ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿದ ಆರು ತಿಂಗಳೊಳಗಾಗಿ ಸಕ್ಷಮ ಪ್ರಾಧಿಕಾರದ ಅನುಮೋದನೆಯೊಂದಿಗೆ ಇಂತಹ ದೂರುಗಳನ್ನು ವ್ಯವಹರಿಸಲು ಕಠಿಣ ಕಾರ್ಯವಿಧಾನವನ್ನು ರೂಪಿಸುವುದು.

9. ರಾಜ್ಯದಲ್ಲಿ ಜಾಗೃತ ವ್ಯವಸ್ಥೆಯ ಮೇಲುಸ್ತುವಾರಿಗಾಗಿ ಕೆಳಕಂಡ ಸದಸ್ಯರುಗಳನ್ನೊಳಗೊಂಡ ಒಂದು **ಜಾಗೃತ ಸಲಹಾ ಮಂಡಳಿ**ಯನ್ನು (Vigilance Advisory Board) ಸೃಜಿಸಲಾಗಿದೆ:–

| | |
|---|---|
| 1. ಮುಖ್ಯ ಕಾರ್ಯದರ್ಶಿ | – ಮಂಡಳಿಯ ಅಧ್ಯಕ್ಷರು |
| 2. ಅಪರ ಮುಖ್ಯ ಕಾರ್ಯದರ್ಶಿ, ಒಳಾಡಳಿತ ಇಲಾಖೆ | – ಸದಸ್ಯರು |
| 3. ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | – ಸದಸ್ಯರು |
| 4. ಪ್ರಧಾನ ಕಾರ್ಯದರ್ಶಿ, ಸಿ.ಆ.ಸು.ಇಲಾಖೆ | – ಸದಸ್ಯರು |
| 5. ಡಿ.ಜಿ. & ಐ.ಜಿ.ಪಿ. | – ಸದಸ್ಯರು |
| 6. ಆಡಳಿತ ಮತ್ತು ಸಾರ್ವಜನಿಕ ವಿಷಯಗಳಲ್ಲಿ ಅನುಭವ ಮತ್ತು ಪರಿಣಿತಿ ಹೊಂದಿರುವ ಇಬ್ಬರು ಖ್ಯಾತ ಉನ್ನತ ವ್ಯಕ್ತಿಗಳು | – ಸದಸ್ಯರು |
| 7. ಕಾರ್ಯದರ್ಶಿ, ಸಿ.ಆ.ಸು.ಇಲಾಖೆಯ ಜಾಗೃತ ವಿಭಾಗ | – ಸದಸ್ಯ ಕಾರ್ಯದರ್ಶಿ |

10. ಜಾಗೃತ ಸಲಹಾ ಮಂಡಳಿಯು ಕನಿಷ್ಠ ಮೂರು ತಿಂಗಳಿಗೊಮ್ಮೆ ಸಭೆ ಸೇರಿ,–

1) ಸರ್ಕಾರದಲ್ಲಿನ ಜಾಗೃತ ಕೋಶಗಳ ಕಾರ್ಯನಿರ್ವಹಣೆಯನ್ನು ಪರಿಶೀಲಿಸುವುದು;
2) ಭ್ರಷ್ಟಾಚಾರ ನಿಗ್ರಹ ದಳದ ಕಾರ್ಯದಲ್ಲಿನ ಪ್ರಗತಿಯನ್ನು ಮತ್ತು ಬಾಕಿ ಇರುವ ಪ್ರಕರಣಗಳನ್ನು ಪರಿಶೀಲಿಸುವುದು (ಜಾಗೃತ ಸಲಹಾ ಮಂಡಳಿಯ ಈ ಪರಿಶೀಲನಾ ಕಾರ್ಯವು ಕೇವಲ ಆಡಳಿತಾತ್ಮಕವಾಗಿದ್ದು, ಭ್ರಷ್ಟಾಚಾರ ತಡೆ ಅಧಿನಿಯಮದಡಿಯ ಶಾಸನಾತ್ಮಕ ತನಿಖೆಗಳ ಮೇಲ್ವಿಚಾರಣೆ ಆಗುವುದಿಲ್ಲ);
3) ಸರ್ಕಾರದಲ್ಲಿ ಬಾಕಿ ಇರುವ ಅಭಿಯೋಜನಾ ಮಂಜೂರಾತಿಗಳ ಸ್ಥಿತಿಯನ್ನು ಪರಿಶೀಲಿಸುವುದು; ಮತ್ತು
4) ರಾಜ್ಯದಲ್ಲಿ ಜಾಗೃತ ಮತ್ತು ಭ್ರಷ್ಟಾಚಾರ ನಿಗ್ರಹ ವ್ಯವಸ್ಥೆಗಳನ್ನು ಬಲಪಡಿಸಲು ಅಗತ್ಯ ಸಲಹೆ ಸೂಚನೆಗಳನ್ನು ನೀಡುವುದು.

11. ಭ್ರಷ್ಟಾಚಾರ ನಿಗ್ರಹ ದಳದ ಅಧಿಕಾರಿಗಳ ವಿರುದ್ಧ ಸ್ವೀಕೃತವಾಗುವ ದೂರುಗಳು/ ಆರೋಪಗಳು/ ಕುಂದುಕೊರತೆಗಳನ್ನು ಪರಿಶೀಲಿಸಲು ಜಾಗೃತ ಸಲಹಾ ಮಂಡಳಿಯು ಅಧಿಕಾರ ಹೊಂದಿರುತ್ತದೆ. ಮುಂದುವರೆದು, ದೂರನ್ನು ಪರಿಶೀಲಿಸಿದ ನಂತರ ಜಾಗೃತ ಸಲಹಾ ಮಂಡಳಿಯು ಭ್ರಷ್ಟಾಚಾರ ನಿಗ್ರಹ ದಳದ ಅಪರ ಪೊಲೀಸ್ ಮಹಾನಿರ್ದೇಶಕರಿಂದ ವರದಿ ಪಡೆಯುವ ಬಗ್ಗೆ ತೀರ್ಮಾನಿಸಬಹುದು ಮತ್ತು ಒಂದು ವೇಳೆ ಅಪರ ಪೊಲೀಸ್ ಮಹಾನಿರ್ದೇಶಕರು, ಭ್ರಷ್ಟಾಚಾರ ನಿಗ್ರಹ ದಳ, ಇವರ ವಿರುದ್ಧ ದೂರುಗಳಿದ್ದಲ್ಲಿ, ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರಿಂದ ವರದಿ ಪಡೆಯುವುದು. ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರು ಅಪರ ಪೊಲೀಸ್ ಮಹಾನಿರ್ದೇಶಕರ ಅಭಿಪ್ರಾಯ/ವಿವರಣೆ ಪಡೆದು ಜಾಗೃತ ಸಲಹಾ ಮಂಡಳಿಗೆ ವರದಿ ಸಲ್ಲಿಸುವುದು. ಜಾಗೃತ ಸಲಹಾ ಮಂಡಳಿಯು ಭ್ರಷ್ಟಾಚಾರ ನಿಗ್ರಹ ದಳದಿಂದ ಅಥವಾ ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್‌ರವರಿಂದ ಸ್ವೀಕೃತವಾಗುವ ಅಭಿಪ್ರಾಯದೊಂದಿಗೆ ದೂರನ್ನು ಪರಿಶೀಲಿಸಿ ಮುಂದಿನ ಕ್ರಮದ ಬಗ್ಗೆ ತೀರ್ಮಾನಿಸಬಹುದು. ಜಾಗೃತ ಸಲಹಾ ಮಂಡಳಿಯು ದೂರುಗಳನ್ನು ಬಾಹ್ಯ ಸಂಸ್ಥೆಯಿಂದ ತನಿಖೆ ನಡೆಸಲು ಮೇಲ್ನೋಟಕ್ಕೆ ಸಾಕಷ್ಟು ಕಾರಣಗಳು ಇವೆ ಎಂದು ತೀರ್ಮಾನಿಸಿದಲ್ಲಿ ಇಂತಹ ವಿಷಯವನ್ನು ಮಾನ್ಯ ಮುಖ್ಯಮಂತ್ರಿಯವರ ಅನುಮೋದನೆಯೊಂದಿಗೆ ಅಪರಾಧ ತನಿಖಾ ಇಲಾಖೆ (ಸಿ.ಐ.ಡಿ.) ಅಂತಹ ಸಂಸ್ಥೆಗೆ ವಹಿಸಬಹುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ:ಎಫ್‌ಡಿ 43 ಎಫ್‌ಆರ್‌ಸಿ 2016, ದಿನಾಂಕ: 04.03.2016ರಂದು ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶದ ಮೇರೆಗೆ ಮತ್ತು ಅವರ ಹೆಸರಿನಲ್ಲಿ,

**ಎಲ್.ಕೆ. ಅತೀಕ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ೨೦೦ ಪ್ರತಿಗಳು)

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ– V | ಬೆಂಗಳೂರು, ಮಂಗಳವಾರ, ಮಾರ್ಚ್ ೧೫, ೨೦೧೬ (ಫಾಲ್ಗುಣ ೨೫, ಶಕ ವರ್ಷ ೧೯೩೭) | ನಂ. ೩೭೬ |
| *Part– V* | *Bengaluru, Tuesday, March 15, 2016 (Palguna 25, Shaka Varsha 1937)* | *No. 376* |


**ಕರ್ನಾಟಕ ಲೋಕಸೇವಾ ಆಯೋಗ**

**"ಉದ್ಯೋಗ ಸೌಧ", ಬೆಂಗಳೂರು–560 001**

**ಅಧಿಸೂಚನೆ**

**ಸಂಖ್ಯೆ: ಇ(1)12530/2015–16/ಪಿಎಸ್‌ಸಿ, ದಿನಾಂಕ: 11–03–2016**

**1.** ಕರ್ನಾಟಕ ರಾಜ್ಯ ಲೆಕ್ಕ ಪತ್ರ ಸೇವೆಗಳು (ನೇಮಕಾತಿ) ನಿಯಮಗಳು 2011, ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖಾ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು 2015ಗಳನ್ವಯ ಹಾಗೂ ಕಾಲಕಾಲಕ್ಕೆ ತಿದ್ದುಪಡಿಯಾದ ಇತರೆ ನಿಯಮಗಳಡಿಯಲ್ಲಿ ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕಪತ್ರ ಇಲಾಖೆಯಲ್ಲಿ ಖಾಲಿ ಇರುವ "ಸಹಾಯಕ ನಿಯಂತ್ರಕರು" ಸಮೂಹ 'ಎ' ವೃಂದದ **54** ಹುದ್ದೆಗಳು ಮತ್ತು "ಲೆಕ್ಕಪರಿಶೋಧನಾಧಿಕಾರಿ" ಸಮೂಹ 'ಬಿ' ವೃಂದದ **108** ಹುದ್ದೆಗಳು **ಒಟ್ಟು 162** ಹುದ್ದೆಗಳನ್ನು ಭರ್ತಿ ಮಾಡಲು ಆಯೋಗವು ನಡೆಸುವ ಪೂರ್ವಭಾವಿ ಪರೀಕ್ಷೆಗೆ ಅರ್ಹ ಅಭ್ಯರ್ಥಿಗಳಿಂದ ON-LINE ಮೂಲಕ ಅರ್ಜಿಗಳನ್ನು ಆಹ್ವಾನಿಸಿದೆ.

**2.** ಪ್ರಸ್ತುತ ನಿಯಮಗಳಿಗೊಳಪಟ್ಟಂತೆ ಸ್ಪರ್ಧಾತ್ಮಕ ಪರೀಕ್ಷೆಯ ನಡೆಸುವಿಕೆಯು ಕರ್ನಾಟಕ ಗೆಜೆಟೆಡ್ ಪ್ರೊಬೇಷನರ್ಸ್ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು 1997ರ ನಿಯಮ (5) ಮತ್ತು (7) ಅನ್ನು ಯಥಾವತ್ತಾಗಿ ಅನ್ವಯಿಸುತ್ತವೆ.

- ❖ **ಪೂರ್ವಭಾವಿ ಪರೀಕ್ಷೆಯನ್ನು 2016ರ ಜೂನ್/ಜುಲೈ ತಿಂಗಳಿನಲ್ಲಿ ನಡೆಸಲು ಉದ್ದೇಶಿಸಲಾಗಿದೆ.**
- ❖ **ಮುಖ್ಯ ಪರೀಕ್ಷೆಯನ್ನು 2016ರ ಅಕ್ಟೋಬರ್/ನವೆಂಬರ್ ತಿಂಗಳಿನಲ್ಲಿ ನಡೆಸಲು ಉದ್ದೇಶಿಸಲಾಗಿದೆ.**
- ❖ **ಪರೀಕ್ಷಾ ದಿನಾಂಕದ ಬದಲಾವಣೆಯು ಆಯೋಗದ ವಿವೇಚನೆಗೆ ಒಳಪಟ್ಟಿರುತ್ತದೆ.**

> **<u>ವಿಶೇಷ ಸೂಚನೆ</u>:– ಅಭ್ಯರ್ಥಿಗಳು ಅರ್ಜಿಯಲ್ಲಿ ಕೋರುವ ಎಲ್ಲಾ ಮೀಸಲಾತಿ ಪ್ರಮಾಣ ಪತ್ರಗಳನ್ನು ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಅಧಿಸೂಚನೆಯ ಅನುಬಂಧ–2ರಲ್ಲಿ ಸೂಚಿಸಿರುವ ನಮೂನೆಗಳಲ್ಲಿಯೇ ಕಡ್ಡಾಯವಾಗಿ ಪಡೆದಿಟ್ಟುಕೊಂಡಿರತಕ್ಕದ್ದು.**

**3.** ನೇಮಕಾತಿ ಪ್ರಾಧಿಕಾರಿಗಳು ದೃಢೀಕರಿಸಿ ನೀಡಿರುವ ಹುದ್ದೆಗಳ ವರ್ಗೀಕರಣವನ್ನು ಅನುಬಂಧ–(1)ರಲ್ಲಿ ತೋರಿಸಿದೆ.. ಅನುಬಂಧದಲ್ಲಿ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

**4.** (1) **ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಪ್ರಾರಂಭಿಕ ದಿನಾಂಕ: 14–03–2016**

(2) **ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 15–04–2016**

(3) **ಪೂರ್ವಭಾವಿ ಪರೀಕ್ಷೆಯ ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 16–04–2016**

**<u>ಅಂಚೆ ಕಛೇರಿಯ ಕಾರ್ಯದ ವೇಳೆಯೊಳಗೆ ಮಾತ್ರ.</u>**

ಪೂರ್ವಭಾವಿ ಪರೀಕ್ಷೆಯ ಅರ್ಜಿಗಳನ್ನು **ON LINE** ಮೂಲಕ ಭರ್ತಿ ಮಾಡಿ **<u>ಪರೀಕ್ಷಾ ಶುಲ್ಕವನ್ನು ಅಂಚೆ ಕಛೇರಿಯ ಕಾರ್ಯದ ವೇಳೆಯೊಳಗೆ ಕರ್ನಾಟಕ ರಾಜ್ಯದ ಯಾವುದೇ ಎಲೆಕ್ಟ್ರಾನಿಕ್ ಅಂಚೆ ಕಛೇರಿಗಳಲ್ಲಿ (Computerised</u>**

**Post Offices Only) ಮಾತ್ರ ಸಂದಾಯ ಮಾಡಬಹುದಾಗಿರುತ್ತದೆ.** ಶುಲ್ಕವನ್ನು ಪಾವತಿಸದೇ ಇರುವ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು. **ಎಲೆಕ್ಟ್ರಾನಿಕ್ ಅಂಚೆ ಕಛೇರಿಗಳ ಪಟ್ಟಿಯನ್ನು ಆಯೋಗದ ವೆಬ್‌ಸೈಟ್ "http://kpsc.kar.nic.in"ನಲ್ಲಿ ಬಿತ್ತರಿಸಲಾಗಿದೆ.**

4. ಅಭ್ಯರ್ಥಿಗಳು **ON LINE** ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ಓದಿ ತಿಳಿದುಕೊಳ್ಳತಕ್ಕದ್ದು.

**ಹಂತ 1:–** ಅಭ್ಯರ್ಥಿಗಳು ಆಯೋಗದ ಅಧಿಕೃತ ವೆಬ್‌ಸೈಟ್ **http://kpsc.kar.nic.in** ಅನ್ನು ತೆರೆದ ಕೂಡಲೇ ಕಂಪ್ಯೂಟರ್ ಪರದೆಯ ಮೇಲೆ **'Application For Assistant Controller/Audit Officer (Karnataka State Audit and Accounts Department) Priliminary Examination-2016** ಎಂದು ಮೂಡುತ್ತದೆ ಮತ್ತು ಅಧಿಸೂಚನೆ/ಪರೀಕ್ಷಾ ಶುಲ್ಕದ ವಿವರಗಳು ಲಭ್ಯವಾಗಲಿದ್ದು, **ಅಭ್ಯರ್ಥಿಗಳು ಅರ್ಜಿ ಭರ್ತಿ ಮಾಡುವ ಮುನ್ನ ಅಧಿಸೂಚನೆಯಲ್ಲಿನ ಎಲ್ಲಾ ವಿವರಗಳನ್ನು ಮತ್ತು ಅರ್ಜಿ ಸಲ್ಲಿಸುವ ಸೂಚನೆಗಳನ್ನು ತಪ್ಪದೇ ಓದತಕ್ಕದ್ದು.** ನಂತರ ನಿಯಮ ಮತ್ತು ಷರತ್ತುಗಳನ್ನು ಓದಿಕೊಂಡು ಕೆಳಗಿನ ಚೆಕ್‌ಬಾಕ್ಸ್ ಅನ್ನು ಒತ್ತುವ ಮೂಲಕ ಒಪ್ಪಿಕೊಳ್ಳತಕ್ಕದ್ದು ಮತ್ತು Open Application Button ಅನ್ನು ಕ್ಲಿಕ್ ಮಾಡಿ ಮುಂದುವರೆಯಬೇಕು. ನಂತರ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು.

**ಹಂತ 2:–** ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅಭ್ಯರ್ಥಿಯು ತನ್ನ ಇತ್ತೀಚಿನ ಭಾವಚಿತ್ರವನ್ನು ಒಂದು ಸ್ವಚ್ಛವಾದ ಬಿಳಿ ಹಾಳೆಯ ಮೇಲೆ ಲಗತ್ತಿಸಿ ಅದರ ಕೆಳಗೆ ಕಪ್ಪು ಶಾಯಿಯ ಸ್ಕೆಚ್/ಮಾರ್ಕರ್ ಪೆನ್ನಿನಿಂದ ಸಹಿ ಮಾಡಿ (ಯಾವುದೇ ಕಾರಣಕ್ಕೂ ಭಾವ ಚಿತ್ರದ ಮೇಲೆ ಸಹಿ ಮಾಡಬಾರದು) ನಂತರ ಭಾವಚಿತ್ರ (Photo) ಮತ್ತು ಸಹಿಯನ್ನು ಒಳಗೊಂಡಂತೆ ಈ ಕೆಳಗಿನ ಅಳತೆ ಪ್ರಕಾರ ಸ್ಕ್ಯಾನ್ ಮಾಡಿ ಇಟ್ಟುಕೊಂಡಿರತಕ್ಕದ್ದು.

| | |
|---|---|
| o **ಫೈಲ್ ಅಳತೆ<100 ಕೆಬಿ** | **ಪಾಸ್ ಪೋರ್ಟ್ ಭಾವಚಿತ್ರದ ಅಳತೆಗಳು:** 45 ಎಂ.ಎಂ (ಉದ್ದ) X 35 ಎಂ.ಎಂ. (ಅಗಲ) |
| o **ಡಿಪಿಐ ಹಿನ್ನೆಲೆ=100 ಡಿಪಿಐ** | |
| o **ಇಮೇಜ್ ಅಳತೆ=100%** | **ಸಹಿ ಅಳತೆ:** 20 ಎಂ.ಎಂ (ಉದ್ದ) X 35 ಎಂ.ಎಂ. (ಅಗಲ) |
| o **ಕಲರ್** | |
| o **ಪಿಎನ್‌ಜಿ (png) / ಜೆಪಿಇಜಿ (jpeg)** | |

**ಹಂತ 3:–** ಅರ್ಜಿಯನ್ನು ಭರ್ತಿ ಮಾಡಿದ ನಂತರ ನಮೂದಿಸಿರುವ ವಿವರಗಳನ್ನು ಮತ್ತೊಮ್ಮೆ ಕೂಲಂಕಷವಾಗಿ ಪರಿಶೀಲಿಸಬೇಕು. ಅರ್ಜಿಯಲ್ಲಿ ನಮೂದಿಸಿರುವ ವಿವರಗಳಲ್ಲಿ ಏನಾದರೂ ತಪ್ಪುಗಳಾಗಿದ್ದಲ್ಲಿ ಅದನ್ನು ಸರಿಪಡಿಸಲು Edit button ಮೇಲೆ ಕ್ಲಿಕ್ ಮಾಡಿ ನಂತರ ಅಗತ್ಯ ತಿದ್ದುಪಡಿಗಳನ್ನು ಮಾಡಬಹುದು. **'Submit' button ಅನ್ನು ಒತ್ತಿದ ಮೇಲೆ ಯಾವುದೇ ತಿದ್ದುಪಡಿಗಳನ್ನು ಮಾಡಲು ಅವಕಾಶವಿರುವುದಿಲ್ಲ.**

**ಹಂತ 4:–** ಅರ್ಜಿಯಲ್ಲಿ ಭರ್ತಿ ಮಾಡಿರುವ ಎಲ್ಲಾ ವಿವರಗಳು ಸರಿಯಾಗಿರುತ್ತವೆಯೆಂದು ಮನದಟ್ಟು ಮಾಡಿಕೊಂಡು, ನಂತರ Documents upload button ಅನ್ನು ಒತ್ತಿ ಸ್ಕ್ಯಾನ್ ಮಾಡಿಟ್ಟುಕೊಂಡಿರುವ ಭಾವಚಿತ್ರ (Photo) ಮತ್ತು ಸಹಿಯನ್ನು upload ಮಾಡತಕ್ಕದ್ದು. Photo and Signature upload ಮಾಡಿದ ನಂತರ ಅರ್ಜಿಯಲ್ಲಿ Next Button ಮೇಲೆ ಕ್ಲಿಕ್ ಮಾಡತಕ್ಕದ್ದು. ನಂತರ ಶುಲ್ಕ ಪಾವತಿಸಲು ಚಲನ್ ಅನ್ನು ಡೌನ್‌ಲೋಡ್ ಮಾಡಿಕೊಳ್ಳತಕ್ಕದ್ದು.

**ಹಂತ 5:–** ಚಲನ್ ಅನ್ನು ಡೌನ್‌ಲೋಡ್ ಮಾಡಿಕೊಂಡು ಕರ್ನಾಟಕದ ಯಾವುದೇ ಎಲೆಕ್ಟ್ರಾನಿಕ್ ಅಂಚೆ ಕಛೇರಿಗಳಲ್ಲಿ (Computerised Post Offices Only) ಮಾತ್ರ ಶುಲ್ಕವನ್ನು ಪಾವತಿಸತಕ್ಕದ್ದು. ಅಭ್ಯರ್ಥಿಗಳು ಶುಲ್ಕ ಪಾವತಿಸಿದ 24 ಗಂಟೆಗಳ ನಂತರ ತಮ್ಮ **'Application Preview' ಅನ್ನು** ಡೌನ್‌ಲೋಡ್ ಮಾಡಿಕೊಳ್ಳಬಹುದಾಗಿರುತ್ತದೆ. ಆದಾಗ್ಯೂ ತಮ್ಮ ಅರ್ಜಿಯ **'Application Preview' ಅನ್ನು** ಡೌನ್‌ಲೋಡ್ ಮಾಡಿಕೊಳ್ಳಲು ಸಾಧ್ಯವಾಗದಿದ್ದಲ್ಲಿ ಆನ್‌ಲೈನ್ ಅರ್ಜಿ ಭರ್ತಿ ಮಾಡುವ ಕುರಿತು ನೀಡಲಾದ ಸೂಚನೆಗಳ ಹಂತ–6ರ ಕೆಳಗಿನ ಅಂಕಣದಲ್ಲಿ ತಮ್ಮ ಅರ್ಜಿ ಶುಲ್ಕ ಪಾವತಿ ಮಾಡಿದ ಮಾಹಿತಿಯನ್ನು (ಅಂದರೆ Post Office Name, Pin Code, Receipt No., Transaction date) ಭರ್ತಿ ಮಾಡಿದ ನಂತರ **Paid Status Button** ಅನ್ನು ಒತ್ತಬೇಕು. ಅದಾದ 06 ಗಂಟೆಗಳ ನಂತರ ತಮ್ಮ

ಅರ್ಜಿಯ ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಳ್ಳಬಹುದು. **ಅರ್ಜಿಯ ಪ್ರತಿಯನ್ನು ಮತ್ತು ಶುಲ್ಕ ಸಂದಾಯ ಮಾಡಿದ ಚಲನ್/ವಿವರಗಳನ್ನು ಕಡ್ಡಾಯವಾಗಿ ಅಭ್ಯರ್ಥಿಗಳು ತಮ್ಮೊಂದಿಗೆ ಇಟ್ಟುಕೊಳ್ಳತಕ್ಕದ್ದು ಹಾಗೂ ಆಯೋಗವು ಅಪೇಕ್ಷಿಸಿದಾಗ ಈ ಚಲನ್/ವಿವರಗಳನ್ನು ಹಾಜರುಪಡಿಸತಕ್ಕದ್ದು.**

**4.1** **ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಮಿಂಚಂಚೆ (ಇ–ಮೇಲ್) ವಿಳಾಸವನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು. ಜೊತೆಗೆ ಮತ್ತೊಂದು ಪರ್ಯಾಯ ಮಿಂಚಂಚೆ (ಇ–ಮೇಲ್) ವಿಳಾಸವನ್ನು ಸಹ ಒದಗಿಸತಕ್ಕದ್ದು.**

**4.2** ಅಂತಿಮ ಕ್ಷಣಗಳಲ್ಲಿ ಅರ್ಜಿ ಸಲ್ಲಿಸಲು ಎದುರಾಗಬಹುದಾದ ತೊಡಕುಗಳಿಂದ ಪಾರಾಗಲು ಅಭ್ಯರ್ಥಿಗಳು ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ಕಾಯದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

**4.3** ಶುಲ್ಕವನ್ನು ಪಾವತಿಸಲು ನಿಗದಿಪಡಿಸಿದ ಕೊನೆಯ ದಿನಾಂಕ/ಸಮಯದ ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ. ಡಿ.ಡಿ., ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. **ಶುಲ್ಕ ಸಂದಾಯ ಮಾಡದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.**

**ವಿಶೇಷ ಸೂಚನೆ:** On-line ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ಯಾವುದಾದರೂ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ **(Help line) No. 7899617835** ಮೂಲಕ ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

## 5 ಪರೀಕ್ಷಾ ಶುಲ್ಕ:–

ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ **₹.300**/–ಗಳನ್ನು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಅಂಗವಿಕಲರು ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳು **₹. 25**/–ನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು. ಒಮ್ಮೆ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂತಿರುಗಿಸಲಾಗುವುದಿಲ್ಲ ಅಥವಾ ಅದನ್ನು ಆಯೋಗವು ನಡೆಸುವ ಇತರೆ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ. ಶುಲ್ಕವನ್ನು ಸಂದಾಯ ಮಾಡದಿದ್ದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

## 6 ಅರ್ಹತಾ ಷರತ್ತುಗಳು:–

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿಯಿರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

## 7. ಪರೀಕ್ಷಾ ವಿಧಾನ:–

ಈ ಸ್ಪರ್ಧಾತ್ಮಕ ಪರೀಕ್ಷೆಯು ಎರಡು ಹಂತಗಳನ್ನು ಒಳಗೊಂಡಿರುತ್ತದೆ. ಹೆಚ್ಚಿನ ವಿವರಗಳಿಗೆ ಆಯೋಗದ ವೆಬ್‌ಸೈಟ್‌ನಲ್ಲಿ ಬಿತ್ತರಿಸಿರುವ ನಿಯಮಗಳನ್ನು ನೋಡಲು ಸೂಚಿಸಿದೆ.

**(1) ಪೂರ್ವಭಾವಿ ಪರೀಕ್ಷೆ:–** (ವಸ್ತುನಿಷ್ಠ ಬಹು ಆಯ್ಕೆ ಮಾದರಿ) ಮುಖ್ಯ ಪರೀಕ್ಷೆಗೆ (ಮೈನ್ ಎಕ್ಸಾಮಿನೇಷನ್) ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಸಲುವಾಗಿ.

**(2) ಮುಖ್ಯ ಪರೀಕ್ಷೆ:–** (ಲಿಖಿತ ಪರೀಕ್ಷೆ ಮತ್ತು ವ್ಯಕ್ತಿತ್ವ ಪರೀಕ್ಷೆ)– ಅಭ್ಯರ್ಥಿಗಳನ್ನು ಕರ್ನಾಟಕ ರಾಜ್ಯ ಲೆಕ್ಕಪರಿಶೋಧನೆ ಮತ್ತು ಲೆಕ್ಕ ಪತ್ರ ಇಲಾಖೆಯ ಗ್ರೂಪ್–'ಎ' ಮತ್ತು ಗ್ರೂಪ್–'ಬಿ' ಹುದ್ದೆಗಳಿಗೆ ಆಯ್ಕೆ ಮಾಡುವ ಸಲುವಾಗಿ.

**ಸೆಕ್ಷನ್–ಎ :– ಪೂರ್ವಭಾವಿ ಪರೀಕ್ಷೆ:**

ಪೂರ್ವಭಾವಿ ಪರೀಕ್ಷೆಯು 02 ಪತ್ರಿಕೆಗಳನ್ನು ಒಳಗೊಂಡಿದ್ದು (ವಸ್ತುನಿಷ್ಠ ಬಹುಆಯ್ಕೆ ಮಾದರಿ) ಪ್ರಶ್ನೆಗಳನ್ನು ಒಳಗೊಂಡಿರುತ್ತದೆ.

| ಪತ್ರಿಕೆ | ವಿಷಯ | ಗರಿಷ್ಠ ಅಂಕಗಳು | ಅವಧಿ | ಕಡ್ಡಾಯ/ಐಚ್ಛಿಕ |
|---|---|---|---|---|
| ಪತ್ರಿಕೆ–1 | ಸಾಮಾನ್ಯ ಅಧ್ಯಯನ | 150 | 2 ಗಂಟೆ | ಕಡ್ಡಾಯ |
| ಪತ್ರಿಕೆ–2 | ವಾಣಿಜ್ಯಶಾಸ್ತ್ರ ಮತ್ತು ನಿರ್ವಹಣೆ<br>**(ಗೆಜೆಟೆಡ್ ಪ್ರೊಬೇಷನರ್ಸ್ ಮುಖ್ಯ ಪರೀಕ್ಷೆಗೆ ನಿಗದಿಪಡಿಸಲಾದ ವಾಣಿಜ್ಯಶಾಸ್ತ್ರ (ಸಂಕೇತ–07) ಮತ್ತು ನಿರ್ವಹಣೆ (ಸಂಕೇತ–14) ಐಚ್ಛಿಕ ವಿಷಯಗಳ ಪಠ್ಯಕ್ರಮವನ್ನು ಒಳಗೊಂಡಿರುತ್ತದೆ)** | 300 | 2 ಗಂಟೆ | ಕಡ್ಡಾಯ |
| | **ಒಟ್ಟು** | **450** | | |

**ಟಿಪ್ಪಣಿ:–**

(ಅ) ಪ್ರಶ್ನೆ ಪತ್ರಿಕೆಯು ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳೆರಡರಲ್ಲೂ ಇರುತ್ತದೆ. ಅಭ್ಯರ್ಥಿಯು ಉತ್ತರಗಳನ್ನು ಪೂರ್ಣವಾಗಿ ಕನ್ನಡ ಅಥವಾ ಪೂರ್ಣವಾಗಿ ಇಂಗ್ಲೀಷ್‌ನಲ್ಲಿ ಉತ್ತರಿಸತಕ್ಕದ್ದು.

(ಆ) ಪೂರ್ವಭಾವಿ ಪರೀಕ್ಷೆಯಲ್ಲಿನ ಪ್ರಶ್ನೆಗಳ ಮಟ್ಟವು ಪದವಿ ಮಟ್ಟದ್ದಾಗಿರುತ್ತವೆ.

(ಇ) ಪ್ರತಿಯೊಂದು ಪತ್ರಿಕೆಯು 2 ಗಂಟೆಗಳ ಕಾಲಾವಧಿಯದ್ದಾಗಿರುತ್ತದೆ.

(ಈ) ಅಧಿಸೂಚನೆಯಲ್ಲಿ ಪ್ರಕಟಿತ ರಿಕ್ತ ಸ್ಥಾನಗಳಿಗೆ ಅನುಗುಣವಾಗಿ 20ರಷ್ಟು ಪ್ರಮಾಣದಲ್ಲಿ ಜಾರಿಯಲ್ಲಿರುವ ಮೀಸಲಾತಿ ನೀತಿಯನ್ವಯ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಇತರೆ ಹಿಂದುಳಿದ ವರ್ಗಗಳು ಮತ್ತು ಸಾಮಾನ್ಯ ವರ್ಗಕ್ಕೆ ಸೇರಿದ ಸಾಕಷ್ಟು ಅಭ್ಯರ್ಥಿಗಳನ್ನು ಅದೇ ಅನುಪಾತದಲ್ಲಿ ಪೂರ್ವಭಾವಿ ಪರೀಕ್ಷೆಯಲ್ಲಿ ಅಭ್ಯರ್ಥಿಯು ಗಳಿಸಿದ ಅಂಕಗಳ ಆಧಾರದ ಮೇಲೆ ಮುಖ್ಯ ಪರೀಕ್ಷೆಗೆ ಪ್ರವೇಶ ನೀಡಲಾಗುತ್ತದೆ.

**ಸೆಕ್ಷನ್–ಬಿ:–ಮುಖ್ಯ ಪರೀಕ್ಷೆ:**

ಮುಖ್ಯ ಪರೀಕ್ಷೆಯು ಲಿಖಿತ ಪರೀಕ್ಷೆ ಮತ್ತು ವ್ಯಕ್ತಿತ್ವ ಪರೀಕ್ಷೆಯನ್ನು ಒಳಗೊಂಡಿರುತ್ತದೆ.

**ಲಿಖಿತ ಪರೀಕ್ಷೆ:–**

| ಪತ್ರಿಕೆ | ವಿಷಯ | ಗರಿಷ್ಠ ಅಂಕಗಳು | ಅವಧಿ | ಕಡ್ಡಾಯ/ಐಚ್ಛಿಕ |
|---|---|---|---|---|
| **ಪತ್ರಿಕೆ–1** | ಕನ್ನಡ | 150 | 3 ಗಂಟೆ | ಕಡ್ಡಾಯ |
| **ಪತ್ರಿಕೆ–2** | ಇಂಗ್ಲೀಷ್ | 150 | 3 ಗಂಟೆ | ಕಡ್ಡಾಯ |
| **ಪತ್ರಿಕೆ–3** | ಸಾಮಾನ್ಯ ಅಧ್ಯಯನ | 300 | 3 ಗಂಟೆ | ಕಡ್ಡಾಯ |
| **ಪತ್ರಿಕೆ–4** | ಸಾಮಾನ್ಯ ಅಧ್ಯಯನ | 300 | 3 ಗಂಟೆ | ಕಡ್ಡಾಯ |
| **ಪತ್ರಿಕೆ–5** | ಫೈನಾನ್ಶಿಯಲ್ ಅಕೌಂಟಿಂಗ್, ಮ್ಯಾನೇಜ್‌ಮೆಂಟ್ ಅಂಡ್ ಅನಾಲಿಸಿಸ್ | 300 | 3 ಗಂಟೆ | ಕಡ್ಡಾಯ |
| **ಪತ್ರಿಕೆ–6** | ಪ್ರಿನ್ಸಿಪಲ್ಸ್ ಆಫ್ ಮ್ಯಾನೇಜ್‌ಮೆಂಟ್, ಆರ್ಗನೈಜೇಷನ್ ಬಿಹೇವಿಯರ್, ಟ್ರೈನಿಂಗ್ ಅಂಡ್ ಡೆವೆಲಪ್‌ಮೆಂಟ್ | 300 | 3 ಗಂಟೆ | ಕಡ್ಡಾಯ |
| **ಪತ್ರಿಕೆ–7** | ಕಾರ್ಪೋರೇಟ್ ಫೈನಾನ್ಸ್, ಬಿಸಿನೆಸ್ ಎಕಾನಮಿಕ್ ಅಂಡ್ ಟ್ಯಾಕ್ಸೇಷನ್ | 300 | 3 ಗಂಟೆ | ಕಡ್ಡಾಯ |
| **ಪತ್ರಿಕೆ–8** | ಪ್ರಿನ್ಸಿಪಲ್ಸ್ ಅಂಡ್ ಪ್ರಾಕ್ಟೀಸ್ ಆಫ್ ಆಡಿಟಿಂಗ್, ಕಂಪ್ಯೂಟರ್ ಕಾನ್ಸೆಪ್ಟ್ಸ್ ಅಂಡ್ ಇ–ಕಾಮರ್ಸ್ | 300 | 3 ಗಂಟೆ | ಕಡ್ಡಾಯ |
| | **ಒಟ್ಟು** | **2100** | | |

**ಟಿಪ್ಪಣಿ:–**

(1) ಕಡ್ಡಾಯ ಕನ್ನಡ ಮತ್ತು ಇಂಗ್ಲೀಷ್ ಪತ್ರಿಕೆಗಳಲ್ಲಿ ಪಡೆದ ಅಂಕಗಳು ಅರ್ಹತಾದಾಯಕ ಸ್ವರೂಪದ್ದಾಗಿರುತ್ತವೆ. ಅರ್ಹತೆ ಪಡೆಯಲು ಈ ಪ್ರತಿಯೊಂದು ಪತ್ರಿಕೆಯಲ್ಲಿ ಕನಿಷ್ಠ ಶೇಕಡ 30 ಮತ್ತು ಸರಾಸರಿ ಶೇಕಡ 35 ಅಂಕಗಳನ್ನು ನಿಗದಿಪಡಿಸಲಾಗಿದೆ. ಈ ಎರಡೂ ಪತ್ರಿಕೆಗಳಲ್ಲಿ ಗಳಿಸಿದ ಅಂಕಗಳನ್ನು ಅಭ್ಯರ್ಥಿಗಳ ಆಯ್ಕೆಯ ಅರ್ಹತೆಯನ್ನು ನಿಗದಿಪಡಿಸುವಲ್ಲಿ ಪರಿಗಣಿಸಲಾಗುವುದಿಲ್ಲ. ಈ ಎರಡು ಪತ್ರಿಕೆಗಳಲ್ಲಿ ನಿಗದಿತ ಅಂಕಗಳನ್ನು ಗಳಿಸದ ಅಭ್ಯರ್ಥಿಗಳು ಐಚ್ಛಿಕ ವಿಷಯಗಳಲ್ಲಿ ಎಷ್ಟೇ ಹೆಚ್ಚು ಅಂಕಗಳನ್ನು ಗಳಿಸಿದ್ದರೂ ವ್ಯಕ್ತಿತ್ವ ಪರೀಕ್ಷೆಗೆ ಅರ್ಹರಾಗುವುದಿಲ್ಲ ಹಾಗೂ ಇಂತಹ ಅಭ್ಯರ್ಥಿಗಳ ಇತರೆ ವಿಷಯಗಳಲ್ಲಿ ಪಡೆದ ಅಂಕಗಳನ್ನು ಪ್ರಕಟಿಸುವುದಿಲ್ಲ.

(2) ಮುಖ್ಯ ಪರೀಕ್ಷೆಯು ವಿವರಣಾತ್ಮಕ ಮಾದರಿಯಲ್ಲಿರುತ್ತದೆ.

(3) ಪ್ರಶ್ನೆ ಪತ್ರಿಕೆಯು ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳೆರಡರಲ್ಲೂ ಇರುತ್ತದೆ. ಅಭ್ಯರ್ಥಿಯು ಉತ್ತರಗಳನ್ನು ಪೂರ್ಣವಾಗಿ ಕನ್ನಡ ಅಥವಾ ಪೂರ್ಣವಾಗಿ ಇಂಗ್ಲೀಷ್‌ನಲ್ಲಿ ಉತ್ತರಿಸತಕ್ಕದ್ದು.

(4) ಮುಖ್ಯ ಪರೀಕ್ಷೆಯ ಪತ್ರಿಕೆ–(1) ಕಡ್ಡಾಯ ಕನ್ನಡ ಹಾಗೂ ಪತ್ರಿಕೆ–(2) ಕಡ್ಡಾಯ ಆಂಗ್ಲಭಾಷೆ ಪತ್ರಿಕೆಗಳು ಎಸ್.ಎಸ್.ಎಲ್.ಸಿಯ ಪ್ರಥಮ ಭಾಷೆಯ ಮಟ್ಟದ್ದಾಗಿರುತ್ತದೆ. ಮುಖ್ಯ ಪರೀಕ್ಷೆಯ ಇನ್ನಿತರ ವಿಷಯಗಳ ಪತ್ರಿಕೆಗಳು ಪದವಿ ಮಟ್ಟದ್ದಾಗಿರುತ್ತದೆ.

"ಪ್ರಸ್ತುತ ನಿಯಮಗಳಿಗೊಳಪಟ್ಟಂತೆ ಸ್ಪರ್ಧಾತ್ಮಕ ಪರೀಕ್ಷೆಯನ್ನು ನಡೆಸುವಿಕೆಯು ಕರ್ನಾಟಕ ಗೆಜೆಟೆಡ್ ಪ್ರೊಬೇಷನರ್ಸ್ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕಾತಿ) ನಿಯಮಗಳು 1997ರ ನಿಯಮ (5) ಮತ್ತು (7) ಅನ್ನು ಯಥಾವತ್ತಾಗಿ ಅನ್ವಯಿಸತಕ್ಕದು" ಎಂದು ಸದರಿ ನೇಮಕಾತಿ ನಿಯಮಾವಳಿಗಳಲ್ಲಿ ಸೂಚಿಸಿದ್ದು, ಅದರಂತೆ ನಿಯಮ (5) ವಯೋಮಿತಿ ಮತ್ತು ನಿಯಮ (7) ಶೈಕ್ಷಣಿಕ ವಿದ್ಯಾರ್ಹತೆಗೆ ಸಂಬಂಧಪಟ್ಟದ್ದಾಗಿರುತ್ತದೆ.

**ಪರೀಕ್ಷೆಯ ಪಠ್ಯಕ್ರಮ**

**ಪೂರ್ವಭಾವಿ ಮತ್ತು ಮುಖ್ಯ ಪರೀಕ್ಷೆಯ ಕನ್ನಡ ಮತ್ತು ಆಂಗ್ಲಭಾಷೆಯ ವಿವರವಾದ ಪಠ್ಯಕ್ರಮವನ್ನು ಆಯೋಗದ ವೆಬ್‌ಸೈಟ್ "http://kpsc.kar.nic.in/Syllabus"ನಲ್ಲಿ ಬಿತ್ತರಿಸಲಾಗಿದೆ.**

**ಸೆಕ್ಷನ್–ಸಿ:–ವ್ಯಕ್ತಿತ್ವ ಪರೀಕ್ಷೆ:**

ಆಯೋಗವು ನಿಯಮಾನುಸಾರ ನಡೆಸುವ ಮುಖ್ಯ ಪರೀಕ್ಷೆಯಲ್ಲಿ ಗಳಿಸಿದ ಅಂಕಗಳ ಜೇಷ್ಠತೆ ಮತ್ತು ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಇರುವ ಮೀಸಲಾತಿಯನ್ವಯ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ 1:3ರ ಪ್ರಮಾಣದಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೆ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳನ್ನು ವ್ಯಕ್ತಿತ್ವ ಪರೀಕ್ಷೆಗೆ ಪರಿಗಣಿಸಲಾಗುವುದು. ವ್ಯಕ್ತಿತ್ವ ಪರೀಕ್ಷೆಗೆ 100 ಅಂಕಗಳನ್ನು ನಿಗದಿಪಡಿಸಲಾಗಿದೆ. ಆಯೋಗವು ವ್ಯಕ್ತಿತ್ವ ಪರೀಕ್ಷೆಯ ಸಮಯದಲ್ಲಿ ಸೇವೆ ಅಥವಾ ಸೇವೆಗಳಿಗೆ ಅಭ್ಯರ್ಥಿಯಾಗಿರುವ ಆತನು/ಆಕೆಯು ವೈಯಕ್ತಿಕವಾಗಿ ಸೂಕ್ತವಾಗಬಲ್ಲನೆ/ಳೆ ಎಂಬುದನ್ನು ನಿರ್ಧರಿಸುತ್ತದೆ, ವ್ಯಕ್ತಿತ್ವ ಪರೀಕ್ಷೆಯ ಸಮಯದಲ್ಲಿ ಅಭ್ಯರ್ಥಿಯ ಬೌದ್ಧಿಕ ತೀಕ್ಷ್ಣತೆ, ಗ್ರಹಿಸಿದ ವಿಷಯಗಳ ಬಗ್ಗೆ ವಿಮರ್ಶಾ ಶಕ್ತಿ, ಸ್ಪಷ್ಟ ಮತ್ತು ತಾರ್ಕಿಕ ವಿಶ್ಲೇಷಣೆ, ಸಮತೋಲನದ ತೀರ್ಮಾನ ವಿವಿಧ ವಿಷಯಗಳ ಬಗ್ಗೆ ಆಸಕ್ತಿ ಮತ್ತು ಆಳವಾದ ತಿಳುವಳಿಕೆ, ಸಮರ್ಥನೀಯವಾದ ಸಾಮಾಜಿಕ ಬದ್ಧತೆ, ನಾಯಕತ್ವ ಗುಣ ಮತ್ತು ವೈಚಾರಿಕ ಮನೋಭಾವ ಈ ಅರ್ಹತಾ ಗುಣಗಳನ್ನು ನಿರ್ಧರಿಸಿ ಅಂಕಗಳನ್ನು ನೀಡಲಾಗುತ್ತದೆ.

**7.1 ಪರೀಕ್ಷಾ ಕೇಂದ್ರ:–ಪರೀಕ್ಷೆಯನ್ನು ಬೆಂಗಳೂರು ಮತ್ತು ಧಾರವಾಡ ಕೇಂದ್ರಗಳಲ್ಲಿ ನಡೆಸಲಾಗುವುದು.**

**8. ಶೈಕ್ಷಣಿಕ ವಿದ್ಯಾರ್ಹತೆ:**

ಅಭ್ಯರ್ಥಿಯು ಭಾರತ ಸರ್ಕಾರದ ಕಾನೂನು ರೀತ್ಯಾ ಸ್ಥಾಪಿಸಲ್ಪಟ್ಟಿರುವ ವಿಶ್ವವಿದ್ಯಾಲಯದಿಂದ ವಾಣಿಜ್ಯ ಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ (ಎಂ.ಕಾಂ.) ಅಥವಾ ಎಂ.ಬಿ.ಎ. (ಆರ್ಥಿಕ) ವಿದ್ಯಾರ್ಹತೆಯನ್ನು ಹೊಂದಿರತಕ್ಕದ್ದು ಅಥವಾ ಚಾರ್ಟಡ್ ಅಕೌಂಟೆಂಟ್ಸ್ ಅಥವಾ ಐ.ಸಿ.ಡಬ್ಲ್ಯೂ.ಎ. (I.C.W.A)ನಲ್ಲಿ ಫೆಲೋ ಹೊಂದಿರತಕ್ಕದ್ದು. **ಪರಂತು, ಅಭ್ಯರ್ಥಿಗಳು ಯಾವುದಾದರೂ ಪರೀಕ್ಷೆಗೆ ಹಾಜರಾಗಿದ್ದಲ್ಲಿ ಮತ್ತು ಆ ಪರೀಕ್ಷೆಯಲ್ಲಿ ಉತ್ತೀರ್ಣರಾದಲ್ಲಿ ಆಯೋಗವು ನಡೆಸುವ ಪೂರ್ವಭಾವಿ ಪರೀಕ್ಷೆಗೆ ಶೈಕ್ಷಣಿಕವಾಗಿ ಅರ್ಹರಾಗುವುದಾದಲ್ಲಿ, ಆದರೆ ಆ ಪರೀಕ್ಷೆಯ ಫಲಿತಾಂಶ ಪ್ರಕಟಗೊಳ್ಳದೇ ಇದ್ದಲ್ಲಿ, ಅಂತಹ ಅಭ್ಯರ್ಥಿಗಳು ಪೂರ್ವಭಾವಿ ಪರೀಕ್ಷೆಗೆ ಪ್ರವೇಶ ಪಡೆಯಲು ಅರ್ಹರಾಗುತ್ತಾರೆ.**

ರಾಜ್ಯ ಲೆಕ್ಕಪತ್ರ ಇಲಾಖೆ ಗ್ರೂಪ್–ಎ ಮತ್ತು ಬಿ ಹುದ್ದೆಗಳ ಮುಖ್ಯ ಪರೀಕ್ಷೆಯನ್ನು ತೆಗೆದುಕೊಳ್ಳಬಹುದೆಂದು ಆಯೋಗವು ಘೋಷಿಸಿದ ಅರ್ಹರಾದ ಎಲ್ಲಾ ಅಭ್ಯರ್ಥಿಗಳು ಮುಖ್ಯ ಪರೀಕ್ಷೆಗೆ ಅರ್ಜಿ ಸಲ್ಲಿಸುವಾಗ ಸಂಬಂಧಿಸಿದ ವಿದ್ಯಾರ್ಹತೆ ಪರೀಕ್ಷೆಯನ್ನು ಪಾಸು ಮಾಡಿರುವ ಬಗ್ಗೆ ಸಾಕ್ಷ್ಯಾಧಾರವನ್ನು ಒದಗಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳಿಗೆ ಮುಖ್ಯ ಪರೀಕ್ಷೆಗೆ ಪ್ರವೇಶ ನೀಡುವುದಿಲ್ಲ.

**9. <u>ವಯೋಮಿತಿ:</u>**

ಅರ್ಜಿಯನ್ನು On-line ಮೂಲಕ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು 21 ವರ್ಷ ಪೂರೈಸಿರತಕ್ಕದ್ದು ಹಾಗೂ ಗರಿಷ್ಠ ವಯೋಮಿತಿಯನ್ನು ಈ ಕೆಳಕಂಡಂತೆ ಮೀರಿರಬಾರದು.

| | |
|---|---|
| **ಸಾಮಾನ್ಯ ಅರ್ಹತೆ** | **35 ವರ್ಷ** |
| **ಪ್ರವರ್ಗ– 2ಎ, 2ಬಿ, 3ಎ, 3ಬಿ** | **38 ವರ್ಷ** |
| **ಪ.ಜಾ/ಪ.ಪಂ/ಪ್ರವರ್ಗ–1** | **40 ವರ್ಷ** |

1. ಅಂಗವಿಕಲರು ಮತ್ತು ವಿಧವೆಯರಿಗೆ ವಯೋಮಿತಿಯಲ್ಲಿ 10 ವರ್ಷಗಳ ಸಡಿಲಿಕೆಯುಂಟು. ಅಂಗವಿಕಲ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಆಸುಇ 104 ಸೆನೆನಿ 2005 ದಿನಾಂಕ:13–09–2005ರಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ 115 ಸೆನೆನಿ 2005, ದಿನಾಂಕ 19/11/2005ರಲ್ಲಿ ನಿಗದಿಪಡಿಸಿದಂತೆ ಪ್ರಮಾಣ ಪತ್ರವನ್ನು ತೆಗೆದಿಟ್ಟುಕೊಂಡಿರತಕ್ಕದ್ದು (ಈ ಪ್ರಮಾಣಪತ್ರದ ನಮೂನೆಯನ್ನು **ಅನುಬಂಧ–2ರಲ್ಲಿ** ತೋರಿಸಲಾಗಿದೆ.) ಹಾಗೂ ವಿಧವೆಯರು **"**ವಿಧವೆ**"** ಎಂಬ ಬಗ್ಗೆ ತಹಸೀಲ್ದಾರ್ ಕಛೇರಿಯಿಂದ ಪಡೆದ **ಮೃತರ ಕುಟುಂಬದ ಜೀವಂತ ಸದಸ್ಯರ ದೃಢೀಕರಣ ಪ್ರಮಾಣ ಪತ್ರವನ್ನು** ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಕಡ್ಡಾಯವಾಗಿ ಪಡೆದಿಟ್ಟುಕೊಂಡಿರತಕ್ಕದ್ದು.
2. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಸಶಸ್ತ್ರ ಕೇಂದ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳು.

**<u>ವಿವರಣೆ:</u>**–(1) ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧನಾಗಿಲ್ಲದೇ) ಸೇವೆ ಸಲ್ಲಿಸಿರುವ ವ್ಯಕ್ತಿ ಎಂದು ಅರ್ಥ. ಆದರೆ ಡಿಫೆನ್ಸ್ ಸೆಕ್ಯುರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ; ಮತ್ತು

(2) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

(ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ

**ಅಥವಾ**

(ಈ) ತನ್ನ ಸ್ವಂತ ಕೋರಿಕೆಯ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ಧಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.

1) **ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.**
2) **ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.**
3) **ಗ್ಯಾಲಂಟ್ರ ಪ್ರಶಸ್ತಿ ವಿಜೇತರು**

**<u>ವಿವರಣೆ</u> (1)**–ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

<u>ವಿವರಣೆ</u> (2)–ಜನ್ಮ ದಿನಾಂಕಕ್ಕಾಗಿ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆಯ ಅಂಕಪಟ್ಟಿ, ಎಸ್.ಎಸ್.ಎಲ್.ಸಿ. ವರ್ಗಾವಣೆ ಪ್ರಮಾಣ ಪತ್ರ (ಟಿ..ಸಿ)/ ಎಸ್.ಎಸ್.ಎಲ್.ಸಿ.ಯ ಸಂಚಿತ ದಾಖಲೆ (ಕ್ಯುಮುಲೇಟಿವ್ ರೆಕಾರ್ಡ್)ಯಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ಆಯೋಗವು ಒಪ್ಪಿಕೊಳ್ಳುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

**10. <u>ಜಾತಿ/ಮೀಸಲಾತಿ ಪ್ರಮಾಣ ಪತ್ರಗಳು:–</u>**

ಮೀಸಲಾತಿ ಕೋರ ಬಯಸುವ ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ನಮೂನೆಗಳಲ್ಲಿಯೇ ಮೀಸಲಾತಿ ಪ್ರಮಾಣ ಪತ್ರಗಳನ್ನು **ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಕಡ್ಡಾಯವಾಗಿ ಪಡೆದಿಟ್ಟುಕೊಂಡಿರತಕ್ಕದ್ದು:–**

| | |
|---|---|
| *ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು* | ***ನಮೂನೆ–ಡಿ*** |
| *ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು* | ***ನಮೂನೆ–ಇ*** |
| *ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು* | ***ನಮೂನೆ–ಎಫ್*** |

ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು **ಸಂಬಂಧಿತ ತಹಶೀಲ್ದಾರ್‌ರವರಿಂದ ಅಂದರೆ ತಹಶೀಲ್ದಾರ್‌ರವರ ಸಹಿ ಮತ್ತು ಮೊಹರು, ಅಥವಾ ಬಾರ್‌ಕೋಡ್, ಹಾಲೋಗ್ರಾಮ್ ಮತ್ತು ವಾಟರ್‌ಮಾರ್ಕ್‌ನೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು.** ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1ರ ಮೀಸಲಾತಿ ಪ್ರಮಾಣ ಪತ್ರಗಳು ರದ್ದಾಗುವವರೆಗೂ ಚಾಲ್ತಿಯಲ್ಲಿರುವುದರಿಂದ ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ನಿಗದಿತ ನಮೂನೆಯಲ್ಲಿ ಪಡೆದಿಟ್ಟುಕೊಂಡಿರತಕ್ಕದ್ದು.

ಹಿಂದುಳಿದ ವರ್ಗಗಳ ಪ್ರವರ್ಗ–2(ಎ), ಪ್ರವರ್ಗ–2(ಬಿ), ಪ್ರವರ್ಗ–3(ಎ) ಮತ್ತು ಪ್ರವರ್ಗ–3(ಬಿ) ಮೀಸಲಾತಿ ಪ್ರಮಾಣ ಪತ್ರಗಳು 05 ವರ್ಷ ಚಾಲ್ತಿಯಲ್ಲಿರುತ್ತವೆ. ಅಭ್ಯರ್ಥಿಗಳು ಪಡೆದಿರುವ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರತಕ್ಕದ್ದು. ಅಭ್ಯರ್ಥಿಗಳು ಮೂಲ ದಾಖಲೆಗಳ ಪರಿಶೀಲನೆಗೆ ಅರ್ಹರಾದಾಗ ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಜಾರಿಯಾಗಿರುವ ಮೀಸಲಾತಿ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಸಾಮಾನ್ಯ ಅರ್ಹತೆಯಡಿಯಲ್ಲಿ ಅರ್ಹರಾದಲ್ಲಿ ಮಾತ್ರ ಪರಿಗಣಿಸಲಾಗುವುದು. ಈ ಪ್ರಮಾಣ ಪತ್ರಗಳ ನಮೂನೆಗಳನ್ನು **ಅನುಬಂಧ–2ರಲ್ಲಿ** ತೋರಿಸಲಾಗಿದೆ. **ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಪಡೆಯಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.**

**11. <u>ಗ್ರಾಮೀಣ ಅಭ್ಯರ್ಥಿ</u>**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 08 ಸೆನೆನಿ 2001 ದಿನಾಂಕ 13–02–2001 ರನ್ವಯ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. **ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮ್ ಮಾಡುವ <u>ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು</u> ನಮೂನೆ–2ನ್ನು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜುವಿನೊಂದಿಗೆ ಹಾಗೂ ಈ ಪ್ರಮಾಣ ಪತ್ರವಲ್ಲದೇ ಮೇಲುಸ್ಥರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು.** ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ಸಂಬಂಧಪಟ್ಟ **ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜು, ಮೊಹರು ಮತ್ತು ಜಾರಿ ಮಾಡಿದ ದಿನಾಂಕದೊಂದಿಗೆ** ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ನಿಗದಿತ ನಮೂನೆಯಲ್ಲಿ ಪಡೆದಿಟ್ಟುಕೊಂಡಿರತಕ್ಕದ್ದು. ಅಭ್ಯರ್ಥಿಗಳು ಮೂಲ ದಾಖಲೆಗಳ ಪರಿಶೀಲನೆಗೆ ಅರ್ಹರಾದಾಗ ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಜಾರಿಯಾಗಿರುವ ಮೀಸಲಾತಿ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು (ಇತರೆ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು) ಹಾಗೂ ಅಂತಹವರು ಗ್ರಾಮೀಣ ಮೀಸಲಾತಿಗೆ ಅನರ್ಹರಾಗುತ್ತಾರೆ. ಅಭ್ಯರ್ಥಿಗಳ ಜಾತಿ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅಂತಹವರು ಗ್ರಾಮೀಣ ಮೀಸಲಾತಿಗೂ ಸಹ ಅನರ್ಹರಾಗುತ್ತಾರೆ. ಈ ಪ್ರಮಾಣ ಪತ್ರಗಳ ನಮೂನೆಗಳನ್ನು **ಅನುಬಂಧ–2ರಲ್ಲಿ** ತೋರಿಸಲಾಗಿದೆ.

**12 ಕನ್ನಡ ಮಾಧ್ಯಮ ಅಭ್ಯರ್ಥಿ**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಇ 71 ಸೇನೆನಿ 2001 ದಿನಾಂಕ 24–10–2002 ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೇಮು ಮಾಡುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ **ಶಾಲೆಯ ಮುಖ್ಯೋಪಾಧ್ಯಾಯರ ಸಹಿ, ಮೊಹರು ಮತ್ತು ಜಾರಿ ಮಾಡಿದ ದಿನಾಂಕದೊಂದಿಗೆ** ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ನಿಗದಿತ ನಮೂನೆಯಲ್ಲಿ ಪಡೆದಿಟ್ಟುಕೊಂಡಿರತಕ್ಕದ್ದು. ಅಭ್ಯರ್ಥಿಗಳು ಮೂಲ ದಾಖಲೆಗಳ ಪರಿಶೀಲನೆಗೆ ಅರ್ಹರಾದಾಗ ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಜಾರಿಯಾಗಿರುವ ಮೀಸಲಾತಿ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಈ ಪ್ರಮಾಣ ಪತ್ರದ ನಮೂನೆಗಳನ್ನು **ಅನುಬಂಧ–2ರಲ್ಲಿ** ತೋರಿಸಲಾಗಿದೆ.

**13 ಅಂಗವಿಕಲ ಅಭ್ಯರ್ಥಿ**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ 03–09–2005 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ –'ಎ' ಮತ್ತು 'ಬಿ' ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 21 ಎಸ್‌ಆರ್‌ಆರ್ 2008 ದಿನಾಂಕ 03–08–2009ರ ಅನುಸೂಚಿಯಡಿ ಸೇರ್ಪಡೆ ಮಾಡಲಾಗಿರುವ ಇಲಾಖೆಗಳು) ಹುದ್ದೆಗಳನ್ನು ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40 ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು.

ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೇನೆನಿ 2005 ದಿನಾಂಕ 19–11–2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ **(ಸಹಿ, ಮೊಹರು ಮತ್ತು ಜಾರಿ ಮಾಡಿದ ದಿನಾಂಕದೊಂದಿಗೆ)** ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ನಿಗದಿತ ನಮೂನೆಯಲ್ಲಿ ಪಡೆದಿಟ್ಟುಕೊಂಡಿರತಕ್ಕದ್ದು (ವೈದ್ಯಕೀಯ ಮಂಡಳಿಯಲ್ಲಿ ಅಧ್ಯಕ್ಷರು ಸೇರಿದಂತೆ ಇಬ್ಬರು ವೈದ್ಯರು ಹಾಜರಿದ್ದು, ಅಭ್ಯರ್ಥಿಯನ್ನು ಪರಿಶೀಲಿಸಿ ಪ್ರಮಾಣ ಪತ್ರ ನೀಡಬಹುದಾಗಿರುತ್ತದೆ. ಆದುದರಿಂದ ನಿಗದಿಪಡಿಸಿರುವ ನಮೂನೆಯಲ್ಲಿ ತೋರಿಸಿರುವಂತೆ ಮೂವರು ವೈದ್ಯಾಧಿಕಾರಿಗಳ ಸಹಿ ಕಡ್ಡಾಯವಾಗಿರುವುದಿಲ್ಲ. ಕನಿಷ್ಠ ಒಬ್ಬರು ವೈದ್ಯಾಧಿಕಾರಿಯವರ ಸಹಿ ಹಾಗೂ ವೈದ್ಯಕೀಯ ಮಂಡಳಿ ಅಧ್ಯಕ್ಷರ ಸಹಿ/ಮೇಲು ಸಹಿ ಪ್ರಮಾಣ ಪತ್ರಕ್ಕೆ ಅವಶ್ಯಕವಾಗಿರುತ್ತದೆ) ಅಭ್ಯರ್ಥಿಗಳು ಮೂಲ ದಾಖಲೆಗಳ ಪರಿಶೀಲನೆಗೆ ಅರ್ಹರಾದಾಗ ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಜಾರಿಯಾಗಿರುವ ಮೀಸಲಾತಿ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಈ ಪ್ರಮಾಣ ಪತ್ರದ ನಮೂನೆಯನ್ನು **ಅನುಬಂಧ–2ರಲ್ಲಿ** ತೋರಿಸಲಾಗಿದೆ. **ಇತರೆ ಯಾವುದೇ ನಮೂನೆಯಲ್ಲಿ ಪಡೆಯಲಾಗಿರುವ ಅಂಗವಿಕಲತೆಯ ಪ್ರಮಾಣ ಪತ್ರಗಳನ್ನು/ಗುರುತಿನ ಚೀಟಿಯ ಪ್ರತಿಗಳನ್ನು ಪರಿಗಣಿಸುವುದಿಲ್ಲ.**

**14.1 ಅನುಚ್ಛೇದ 371(ಜೆ)ರನ್ವಯ ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮೀಸಲಾತಿ**

**ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಅರ್ಹತಾ ಪ್ರಮಾಣ ಪತ್ರಗಳ ನೀಡಿಕೆ) ನಿಯಮಗಳು 2013ಕ್ಕೆ** ಸಂಬಂಧಿಸಿದಂತೆ ನೇರ ನೇಮಕಾತಿಯಲ್ಲಿ ಸ್ಥಳೀಯ ವ್ಯಕ್ತಿಯೆಂಬ (ಹೈದರಾಬಾದ್–ಕರ್ನಾಟಕ) ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರದ ಅಧಿಸೂಚನೆ–II ಸಂಖ್ಯೆ: ಡಿಪಿಎಆರ್ 43 ಹೆಚ್‌ಕೆಸಿ 2013, ದಿನಾಂಕ:29–01–2014ರ **ಅನುಬಂಧ–ಎ ರಲ್ಲಿ** (3(3)ನೇ ನಿಯಮ) ಸೂಚಿಸಿರುವ ನಮೂನೆಯಲ್ಲಿಯೇ ಅರ್ಹತಾ ಪ್ರಮಾಣ ಪತ್ರವನ್ನು ಸಕ್ಷಮ ಪ್ರಾಧಿಕಾರವಾದ ಸಂಬಂಧಪಟ್ಟ ಉಪ ವಿಭಾಗದ ಸಹಾಯಕ ಆಯುಕ್ತರಿಂದ ಪೂರ್ವಭಾವಿ ಪರೀಕ್ಷೆಗೆ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ **ಸಹಿ, ಮೊಹರು ಮತ್ತು ಜಾರಿ ಮಾಡಿದ ದಿನಾಂಕದೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು**. ಅಭ್ಯರ್ಥಿಗಳು ಮೂಲ ದಾಖಲೆಗಳ ಪರಿಶೀಲನೆಗೆ ಅರ್ಹರಾದಾಗ ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಜಾರಿಯಾಗಿರುವ ಮೀಸಲಾತಿ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದ್ದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುತ್ತದೆ. ಈ ಪ್ರಮಾಣ ಪತ್ರಗಳ ನಮೂನೆಯನ್ನು **ಅನುಬಂಧ–2ರಲ್ಲಿ** ತೋರಿಸಲಾಗಿದೆ. **ಈ ನಮೂನೆಯನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಯಲ್ಲಿ ಪಡೆಯಲಾದ ಅರ್ಹತಾ ಪ್ರಮಾಣ ಪತ್ರವನ್ನು** ತಿರಸ್ಕರಿಸಲಾಗುವುದು.

**14.2 ಸರ್ಕಾರಿ ಸೇವೆಯಲ್ಲಿರುವ ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ಸೇರಿದ ಅಭ್ಯರ್ಥಿಗಳಿಗೆ ಮೀಸಲಾತಿ:–**

**ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್–ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) (ಸ್ಥಳೀಯ ವೃಂದಗಳ ರಚನೆ, ಹಂಚಿಕೆ ಮತ್ತು ವ್ಯಕ್ತಿಗಳ ವರ್ಗಾವಣೆ) ನಿಯಮಗಳು 2013ಕ್ಕೆ** ಸಂಬಂಧಿಸಿದಂತೆ ನೇರ ನೇಮಕಾತಿಯಲ್ಲಿ ಸ್ಥಳೀಯ ವ್ಯಕ್ತಿಯೆಂಬ (ಹೈದರಾಬಾದ್–ಕರ್ನಾಟಕ) ಮೀಸಲಾತಿಯನ್ನು ಕೋರುವ ಸರ್ಕಾರಿ ಸೇವೆಯಲ್ಲಿರುವ ನೌಕರರು ತಮ್ಮ

ಸೇವಾ ಪುಸ್ತಕದಲ್ಲಿ (Service Register) ದಿನಾಂಕ:01–01–2013ಕ್ಕಿಂತ ಮುಂಚಿನ ನಮೂದಿನಲ್ಲಿ ಅವರ ಸ್ವಂತ ಊರು ಅಥವಾ ಸ್ಥಳಕ್ಕೆ ಸಂಬಂಧಿಸಿದಂತೆ ಹೈದರಾಬಾದ್–ಕರ್ನಾಟಕ ಪ್ರದೇಶದ ಜಿಲ್ಲೆಗಳಾದ ಬೀದರ್, ಕಲಬುರಗಿ, ರಾಯಚೂರು, ಕೊಪ್ಪಳ, ಬಳ್ಳಾರಿ ಮತ್ತು ಯಾದಗಿರಿ ಕಂದಾಯ ಜಿಲ್ಲೆಯ ಅಡಿಯಲ್ಲಿ ಬರುವಂತಹ ಪ್ರದೇಶದ ನಮೂದು ಇದ್ದ ಪಕ್ಷದಲ್ಲಿ, ಅಂತಹ ಅಭ್ಯರ್ಥಿಗಳು ತಮ್ಮ ಕಛೇರಿ ಮುಖ್ಯಸ್ಥರಿಂದ (ನೇಮಕಾತಿ ಪ್ರಾಧಿಕಾರ) ಸರ್ಕಾರದ ಅಧಿಸೂಚನೆ–I ಸಂಖ್ಯೆ: ಡಿಪಿಎಆರ್ 43 ಹೆಚ್‌ಕೆಸಿ 2013, ದಿನಾಂಕ:29–01–2014ರ **ಅನುಬಂಧ–ಎ** ರಲ್ಲಿ (5(2)ನೇ ನಿಯಮ) ಸೂಚಿಸಿರುವ ನಮೂನೆಯಲ್ಲಿಯೇ ಅರ್ಹತಾ ಪ್ರಮಾಣ ಪತ್ರವನ್ನು ಪೂರ್ವಭಾವಿ ಪರೀಕ್ಷೆಗೆ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ **ಸಹಿ, ಮೊಹರು ಮತ್ತು ಜಾರಿ ಮಾಡಿದ ದಿನಾಂಕದೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು**. ಅಭ್ಯರ್ಥಿಗಳು ಮೂಲ ದಾಖಲೆಗಳ ಪರಿಶೀಲನೆಗೆ ಅರ್ಹರಾದಾಗ ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಜಾರಿಯಾಗಿರುವ ಮೀಸಲಾತಿ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದ್ದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಲಾಗುತ್ತದೆ. ಈ ಪ್ರಮಾಣ ಪತ್ರಗಳ ನಮೂನೆಯನ್ನು **ಅನುಬಂಧ–2ರಲ್ಲಿ** ತೋರಿಸಲಾಗಿದೆ. **ಈ ನಮೂನೆಯನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಯಲ್ಲಿ ಪಡೆಯಲಾದ ಅರ್ಹತಾ ಪ್ರಮಾಣ ಪತ್ರವನ್ನು ತಿರಸ್ಕರಿಸಲಾಗುವುದು.**

**15 ಸೇವಾನಿರತ ಅಭ್ಯರ್ಥಿ:–**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ 5(4)ರನ್ವಯ **"**ಯಾರೇ ಅರ್ಜಿದಾರನು ತಾನು ಅರ್ಜಿ ಸಲ್ಲಿಸುವ ಸಮಯದಲ್ಲಿ ಸರ್ಕಾರದ ಯಾವುದೇ ಇತರೆ ಇಲಾಖೆಯಲ್ಲಿ ಅಥವಾ ಯಾವುದೇ ಇತರ ರಾಜ್ಯ ಸರ್ಕಾರದ ಅಥವಾ ಕೇಂದ್ರ ಸರ್ಕಾರದ ಅಥವಾ ಈ ಸಂಬಂಧವಾಗಿ ಸರ್ಕಾರವು ನಿರ್ದಿಷ್ಟಪಡಿಸಿದ ಯಾವುದೇ ಇತರ ಪ್ರಾಧಿಕಾರದಲ್ಲಿ ಖಾಯಂ ಅಥವಾ ತಾತ್ಕಾಲಿಕ ನೌಕರಿಯಲ್ಲಿದ್ದರೆ ಮತ್ತು ಆತನು ಯಾರ ಅಧೀನದಲ್ಲಿ ಉದ್ಯೋಗದಲ್ಲಿರುವನೋ ಆ ಇಲಾಖಾ ಮುಖ್ಯಸ್ಥರಿಂದ ಅಥವಾ ಸಂದರ್ಭಾನುಸಾರ ಸರ್ಕಾರದಿಂದ ಅಥವಾ ಪ್ರಾಧಿಕಾರದಿಂದ ಒಪ್ಪಿಗೆ ಪಡೆಯದೆಯೇ ಅರ್ಜಿಯನ್ನು ಸಲ್ಲಿಸಿದ್ದರೆ ಆತನು ಸರ್ಕಾರದ ಯಾವುದೇ ಇಲಾಖೆಯಲ್ಲಿನ ಹುದ್ದೆಯ ನೇಮಕಕ್ಕೆ ಅರ್ಹನಾಗಿರತಕ್ಕದ್ದಲ್ಲ.

ಪರಂತು, ಈ ಉಪ ನಿಯಮವು ಸರ್ಕಾರದ ಯಾವುದೇ ಇಲಾಖೆಯಲ್ಲಿ ಸ್ಥಳೀಯ ಅಭ್ಯರ್ಥಿಯಾಗಿ ನೇಮಕಗೊಂಡಿರುವ ವ್ಯಕ್ತಿಗೆ ಅವನನ್ನು ಎಲ್ಲಿಯವರೆಗೆ ಹಾಗೆಂದು ಪರಿಗಣಿಸಲಾಗುವುದೋ ಅಲ್ಲಿಯವರೆಗೆ ಅನ್ವಯವಾಗತಕ್ಕದ್ದಲ್ಲ**"**.

ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಮುನ್ನ ಅನುಮತಿಯನ್ನು ಅಂದರೆ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು (**NOC)** ಕಡ್ಡಾಯವಾಗಿ ಅವರುಗಳ ನೇಮಕಾತಿ ಪ್ರಾಧಿಕಾರಿಗಳ **ಸಹಿ, ಮೊಹರು ಮತ್ತು ಜಾರಿ ಮಾಡಿದ ದಿನಾಂಕದೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು**. ಅಭ್ಯರ್ಥಿಗಳು ಮೂಲ ದಾಖಲೆಗಳ ಪರಿಶೀಲನೆಗೆ ಅರ್ಹರಾದಾಗ ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಜಾರಿಯಾಗಿರುವ ಮೀಸಲಾತಿ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು (**NOC)** ಹಾಜರುಪಡಿಸದಿದ್ದಲ್ಲಿ ಅಂತಹ ಅಭ್ಯರ್ಥಿಗಳ ಅಭ್ಯರ್ಥಿತ್ವವನ್ನು ರದ್ದುಗೊಳಿಸಲಾಗುವುದು. ಈ ಪ್ರಮಾಣ ಪತ್ರದ ನಮೂನೆಯನ್ನು **ಅನುಬಂಧ–2ರಲ್ಲಿ** ತೋರಿಸಲಾಗಿದೆ.

ಸೈನಿಕರ ಸೇವಾ ಒಪ್ಪಂದದ ಮುಕ್ತಾಯಕ್ಕೆ ಮುನ್ನ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಅವರ ಮೇಲಾಧಿಕಾರಿಗಳಿಂದ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಪಡೆದು ಅದರ ದಿನಾಂಕವನ್ನು ಅರ್ಜಿಯಲ್ಲಿ ನಮೂದಿಸಬೇಕು ಹಾಗೂ ಸಂದರ್ಶನ ಸಮಯದಲ್ಲಿ ಅದನ್ನು ಕಡ್ಡಾಯವಾಗಿ ಹಾಜರುಪಡಿಸಬೇಕು.

**16. ಆಯೋಗದೊಡನೆ ಪತ್ರ ವ್ಯವಹಾರ:–**

ಆಯೋಗವು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮನವಿಯ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರವಹಿಸತಕ್ಕದ್ದು. ಅಭ್ಯರ್ಥಿಗಳು ಆಯೋಗದೊಡನೆ ಸಂಪರ್ಕಿಸಲೇಬೇಕಾದ ಸಂದರ್ಭದಲ್ಲಿ ತಮ್ಮ ಮನವಿಯಲ್ಲಿ ಕೆಳಕಂಡ ಮಾಹಿತಿಗಳು ಒದಗಿಸತಕ್ಕದ್ದು:–

**(i)** ಹುದ್ದೆಯ / ವಿಷಯದ ಹೆಸರು

**(ii)** ಅಭ್ಯರ್ಥಿಯ ಪೂರ್ಣ ಹೆಸರು ಹಾಗೂ ಇ–ಮೇಲ್ ಐಡಿ

**(iii)** ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ

**17. ಪ್ರಾಮುಖ್ಯವಾದ ಸೂಚನೆಗಳು:**

**ಕೆಳಕಂಡ ಪ್ರಮಾಣ ಪತ್ರಗಳನ್ನು ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ಕಡ್ಡಾಯವಾಗಿ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಆಯೋಗವು ಸೂಚಿಸಿದಾಗ ಹಾಜರುಪಡಿಸತಕ್ಕದ್ದು.**

1) ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಪ್ರಮಾಣ ಪತ್ರಗಳು/ಎಲ್ಲಾ ವರ್ಷಗಳ ಅಂಕಪಟ್ಟಿಗಳು/ ಸ್ನಾತಕೋತ್ತರ ಪದವಿಯ ಘಟಿಕೋತ್ಸವ ಪ್ರಮಾಣ ಪತ್ರ.
2) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಅಂಕಪಟ್ಟಿ/ ಎಸ್.ಎಸ್.ಎಲ್.ಸಿ ವರ್ಗಾವಣೆಯ ಪ್ರಮಾಣ ಪತ್ರ /ಜನ್ಮ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ (Extract of the Cumulative Record of S.S.L.C.).
3) ಸೈನಿಕ ಸೇವೆಯಿಂದ ಬಿಡುಗಡೆಯಾದ/ ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಪೂರ್ಣವಾಗಿ) (Discharge Certificate) ಮತ್ತು ಪೆನ್ಷನ್ ಪಡೆಯುತ್ತಿರುವ ದಾಖಲೆಯ ಪ್ರತಿ/ ಮಾಜಿ ಸೈನಿಕರ ಅವಲಂಬಿತರಾಗಿದ್ದಲ್ಲಿ, ಮಾಜಿ ಸೈನಿಕರು ಸೇವೆಯಲ್ಲಿರುವಾಗ ಮೃತಪಟ್ಟಿರುವ ಅಥವಾ ಖಾಯಂ ಆಗಿ ಗಾಯಗೊಂಡಿರುವ ಪ್ರಮಾಣ ಪತ್ರ (ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ).
4) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮಿಸಲಾತಿ ಅಭ್ಯರ್ಥಿಗಳು **ನಮೂನೆ ಡಿ/ಇ/ಎಫ್** ನಲ್ಲಿ ತಹಶೀಲ್ದಾರ್‌ರಿಂದ ಪಡೆದ ಪ್ರಮಾಣ ಪತ್ರ.(ಮೀಸಲಾತಿ ಕೋರಿದ್ದಲ್ಲಿ)
5) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
6) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
7) ತಹಶೀಲ್ದಾರರಿಂದ ಪಡೆದ ವಿಧವಾ ಪ್ರಮಾಣ ಪತ್ರ (ವಯೋಮಿತಿಯಲ್ಲಿ ಸಡಿಲಿಕೆ ಕೋರಿದ್ದಲ್ಲಿ)
8) ಅಂಗವಿಕಲ ಪ್ರಮಾಣ ಪತ್ರ ನಿಗದಿತ ನಮೂನೆಯಲ್ಲಿ (ವಯೋಮಿತಿಯಲ್ಲಿ ಸಡಿಲಿಕೆ ಹಾಗೂ ಮೀಸಲಾತಿ ಕೋರಿದ್ದಲ್ಲಿ)
9) ಹೈದರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳ ಮೀಸಲಾತಿಗೆ ಸಂಬಂಧಿಸಿದ **ಅರ್ಹತಾ ಪ್ರಮಾಣಪತ್ರ/ಸ್ವಗ್ರಾಮ ಪ್ರಮಾಣ ಪತ್ರಗಳು** (ಮೀಸಲಾತಿ ಕೋರಿದ್ದಲ್ಲಿ)
10) ಅಪೂರ್ಣವಾಗಿರುವ, ಫೋಟೋ ಮತ್ತು ಸಹಿಯನ್ನು ಅಪ್‌ಲೋಡ್ ಮಾಡದೇ ಇರುವ ಹಾಗೂ ಶುಲ್ಕ ಸಂದಾಯ ಮಾಡದಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
11) ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಫೋಟೋ ಪ್ರತಿಯನ್ನು ಕಡ್ಡಾಯವಾಗಿ ತಮ್ಮೊಂದಿಗೆ ಇಟ್ಟುಕೊಳ್ಳಲು ಸೂಚಿಸಿದೆ.
12) **ಸೇವೆಯಲ್ಲಿರುವ ಅಭ್ಯರ್ಥಿಗಳು ನಿರಾಕ್ಷೇಪಣಾ (NOC) ಪ್ರಮಾಣ ಪತ್ರವನ್ನು ಕೆ.ಸಿ.ಎಸ್.ಆರ್. ನಿಯಮ 1977ರ ನಿಯಮ 5(4)ರನ್ವಯ ಪಡೆದಿಟ್ಟುಕೊಂಡಿರತಕ್ಕದ್ದು.**
13) ಅಭ್ಯರ್ಥಿಗಳು ತಮ್ಮ ಅರ್ಜಿಗಳಲ್ಲಿ ನೀಡುವ ಮಾಹಿತಿಗಳ ಆಧಾರದ ಮೇಲೆ ಅವರುಗಳು ಸ್ಪರ್ಧಾತ್ಮಕ ಪೂರ್ವಭಾವಿ ಪರೀಕ್ಷೆಯನ್ನು ಬರೆಯಲು ಅರ್ಹರೆ ಎಂಬುದನ್ನು ಆಯೋಗವು ಪರಿಶೀಲಿಸಿ ಮೇಲು ನೋಟಕ್ಕೆ ಅರ್ಹರೆಂದು ಕಂಡುಬಂದ ಅಭ್ಯರ್ಥಿಗಳಿಗೆ ಮಾತ್ರ ಪ್ರವೇಶಪತ್ರಗಳನ್ನು ಆನ್‌ಲೈನ್ ಮುಖಾಂತರ ಡೌನ್‌ಲೋಡ್ ಮಾಡಿಕೊಳ್ಳಲು ಅನುಮತಿಸಲಾಗುವುದು. ಆದ್ದರಿಂದ ನಿಗದಿಪಡಿಸಿರುವ ವಯೋಮಿತಿ, ವಿದ್ಯಾರ್ಹತೆ, ಮೀಸಲಾತಿ, ಇತ್ಯಾದಿಗಳಿಗನುಗುಣವಾಗಿ ಅರ್ಜಿಯಲ್ಲಿ ಸರಿಯಾದ ಮಾಹಿತಿ ನೀಡುವುದು ಅಭ್ಯರ್ಥಿಗಳ ಜವಾಬ್ದಾರಿಯಾಗಿರುತ್ತದೆ. ಇಲ್ಲದಿದ್ದಲ್ಲಿ ಅಥವಾ ತಪ್ಪು ಮಾಹಿತಿ ನೀಡಿದಲ್ಲಿ ಅಂತಹ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
14) ಅಭ್ಯರ್ಥಿಗಳು ಮೂಲ ದಾಖಲೆಗಳ ಪರಿಶೀಲನೆಗೆ ಹಾಜರಾದಲ್ಲಿ ತಮ್ಮ ಪೂರ್ವಭಾವಿ ಪರೀಕ್ಷೆಯ ಅರ್ಜಿಯಲ್ಲಿ ಕೋರಿರುವ ಮೀಸಲಾತಿ ಪ್ರಮಾಣ ಪತ್ರಗಳನ್ನು ನಿಗದಿತ ನಮೂನೆಯಲ್ಲಿ ಸಲ್ಲಿಸದಿದ್ದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಗಳನ್ನು ತಿರಸ್ಕರಿಸಲಾಗುವುದು. ಆದುದರಿಂದ ಪೂರ್ವಭಾವಿ ಪರೀಕ್ಷೆಯ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗಾಗಿ ನಿಗದಿತ ನಮೂನೆಯಲ್ಲಿ ಎಲ್ಲಾ ಮೀಸಲಾತಿ ಪ್ರಮಾಣ ಪತ್ರಗಳನ್ನು (ಮೀಸಲಾತಿ ಕೋರಿರುವ) ಪಡೆದಿಟ್ಟುಕೊಂಡಿದ್ದು, ಸದರಿ ಪ್ರಮಾಣ ಪತ್ರಗಳ ಮೂಲ ದಾಖಲೆಗಳನ್ನು ಪರಿಶೀಲನೆಗೆ ಹಾಜರುಪಡಿಸಕ್ಕತದ್ದು. ಪೂರ್ವಭಾವಿ ಪರೀಕ್ಷೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಜಾರಿಯಾಗಿರುವ ಪ್ರಮಾಣ ಪತ್ರಗಳನ್ನು ಸಲ್ಲಿಸಿದಲ್ಲಿ ಅಂತಹ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಿ, ಅಂತಹ ಮೀಸಲಾತಿಗಳನ್ನು ರದ್ದುಪಡಿಸಲಾಗುವುದು.

**18.** **ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಗಳ ಅರ್ಥವನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು:–**

| | | | |
|---|---|---|---|
| ಸಾ.ಅ | ಸಾಮಾನ್ಯ ಅರ್ಹತೆ | GM | General Merit |
| ಪ.ಜಾ | ಪರಿಶಿಷ್ಟ ಜಾತಿ | SC | Scheduled Caste |
| ಪ.ಪಂ | ಪರಿಶಿಷ್ಟ ಪಂಗಡ | ST | Scheduled Tribe |
| ಪ್ರ–1 | ಪ್ರವರ್ಗ–1 | Cat–1 | Category – I |
| 2ಎ | ಪ್ರವರ್ಗ–2ಎ | 2A | Category – 2A |
| 2ಬಿ | ಪ್ರವರ್ಗ–2ಬಿ | 2B | Category – 2B |
| 3ಎ | ಪ್ರವರ್ಗ–3ಎ | 3A | Category – 3A |
| 3ಬಿ | ಪ್ರವರ್ಗ–3ಬಿ | 3B | Category – 3B |
| ಮಾ.ಸೈ | ಮಾಜಿ ಸೈನಿಕ | Ex-MP | Ex-Military Person |
| ಗ್ರಾಮೀಣ | ಗ್ರಾಮೀಣ ಅಭ್ಯರ್ಥಿ | Rural | Rural Candidate |
| ಕ.ಮಾ.ಅ | ಕನ್ನಡ ಮಾಧ್ಯಮ ಅಭ್ಯರ್ಥಿ | KMS | Kannada Medium Student |
| ಅಂ.ವಿ. | ಅಂಗವಿಕಲ ಅಭ್ಯರ್ಥಿ | PH | Physically Handicapped |
| ಹೈ.ಕ. | ಹೈದರಾಬಾದ್–ಕರ್ನಾಟಕ ಅಭ್ಯರ್ಥಿ | HK | Hyderabad-Karnataka Candidate |

**ವಿಶೇಷ ಸೂಚನೆಗಳು:–**

(1) **ON LINE** ಮೂಲಕ ಅರ್ಜಿ ಸಲ್ಲಿಸುವಾಗ ಎಲ್ಲಾ ಮಾಹಿತಿಗಳನ್ನು ಸರಿಯಾಗಿ ಭರ್ತಿ ಮಾಡಿರುವ ಬಗ್ಗೆ ಖಚಿತಪಡಿಸಿಕೊಂಡು ನಂತರ ಅದರ ಒಂದು ಪ್ರತಿಯನ್ನು ಕಡ್ಡಾಯವಾಗಿ ಡೌನ್ ಲೋಡ್ ಮಾಡಿಕೊಂಡು ನೇಮಕಾತಿ ಪ್ರಕ್ರಿಯೆ ಮುಗಿಯುವವರೆಗೂ ಭದ್ರವಾಗಿ ತೆಗೆದಿಟ್ಟುಕೊಂಡಿರತಕ್ಕದ್ದು.

(2) ಈಗಾಗಲೇ ಸೇವೆಯಲ್ಲಿರುವ/ಸೇವೆ ಸಲ್ಲಿಸಿದ ಅಭ್ಯರ್ಥಿಗಳು ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಅನುಬಂಧದಲ್ಲಿ ತೋರಿಸಿರುವ ನಮೂನೆಯಲ್ಲಿ ನಿರಾಕ್ಷೇಪಣಾ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ವಿವರಗಳನ್ನು ಅರ್ಜಿಯಲ್ಲಿ ನಮೂದಿಸತಕ್ಕದ್ದು.

(3) **ಹೆಚ್ಚಿನ ಮಾಹಿತಿಗಾಗಿ ದೂರವಾಣಿ ಸಂಖ್ಯೆಗಳು:**

| | | |
|---|---|---|
| ಕೇಂದ್ರ ಕಛೇರಿಯ ಮಾಹಿತಿ ಕೇಂದ್ರ | : | 080–30574957/ 30574901 |
| ಪ್ರಾಂತೀಯ ಕಛೇರಿ ಮೈಸೂರು | : | 0821–2545956 |
| ಪ್ರಾಂತೀಯ ಕಛೇರಿ ಬೆಳಗಾವಿ | : | 0831–2475345 |
| ಪ್ರಾಂತೀಯ ಕಛೇರಿ ಗುಲ್ಬರ್ಗಾ | : | 08472–227944 |
| ಪ್ರಾಂತೀಯ ಕಛೇರಿ ಶಿವಮೊಗ್ಗ | : | 08182–228099 |

**19.** **ದುರ್ನಡತೆ:–** ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಸಂದರ್ಶನದಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅವನು/ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಹುದ್ದೆಯ ಸಂದರ್ಶನದಿಂದ/ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

**ಮನೋಜ್ ಕುಮಾರ್ ಮೀನಾ**
ಕಾರ್ಯದರ್ಶಿ,
ಕರ್ನಾಟಕ ಲೋಕಸೇವಾ ಆಯೋಗ.

